# ಕನ್ನಡ ಭಾಷಾಚರಿತ್ರೆ

'ಮಾತೆಂಬುದು ಜ್ಯೋತಿರ್ಲಿಂಗ'

ಡಾ||ಸಾ.ಶಿ.ಮರುಳಯ್ಯ

# ಕನ್ನಡ ಭಾಷಾಚರಿತ್ರೆ

ಡಾ. ಸಾ. ಶಿ. ಮರುಳಯ್ಯ

ಪ್ರಕಾಶಕರು :

**ರಾಗಿಣಿ ಶಿಕ್ಷಣ ಪ್ರತಿಷ್ಠಾನ**

ವಿಜಯನಗರ ಎರಡನೇ ಹಂತ

ಬೆಂಗಳೂರು-೫೬೦ ೦೪೦

೧೯೯೨

KANNADA BHASHA CHARITRE : The History of Kannada Language ; Written by Dr. S. S. Marulaiah : Published by Ragini Shikshana Prathisthana, Vijayanagara 2nd Stage, Bangalore-560 040 ; No. of Pages : 4+112 Price Rs. 18-00

First Edition : 1992



ಬೆಲೆ : ಹದಿನೆಂಟು ರೂಪಾಯಿಗಳು

Printed at :

LAVANYA MUDRANA
Vidyapeeta Circle, Bangalore-50

## ಕೃತಜ್ಞತೆಗಳು

ಇದು 'ಅಧ್ಯಯನದ ಹಾದಿಯಲ್ಲಿ' ಗ್ರಂಥ ಮಾಲಿಕೆಯ
ಎರಡನೆಯ ಕುಸುಮ. ಮೊದಲನೆಯದು
'ಶೂನ್ಯ ಸಂಪಾದನೆಗೊಂದು ಮುನ್ನುಡಿ.'
ಈ ಕೃತಿ ರಚನೆಗೆ ಕಾರಣೀಭೂತರಾದ ಕೆ. ಶಿವರಾಮು,
ಮೊದಲಾದ ಐ.ಎ.ಎಸ್. ಮತ್ತು
ಶಿವಯೋಗಿ ಮೊದಲಾದ ಕೆ.ಎ.ಎಸ್. ವಿದ್ಯಾರ್ಥಿ ಮಿತ್ರರಿಗೆ;
ಅಚ್ಚಿಗೆ ಅಣಿಮಾಡಿದ ಶ್ರೀಮತಿ ಹೇಮಾ ಶ್ರೀನಿವಾಸಮೂರ್ತಿ
ಮತ್ತು ಜಯಮ್ಮ ಕರಿಯಣ್ಣ; ಶ್ರೀ ಗ. ಬ. ನಾಗಭೂಷಣ ಇವರಿಗೆ
ಸಕಲ ವಿಧಗಳಿಂದಲೂ ಪ್ರೋತ್ಸಾಹಿಸುತ್ತಿರುವ
ಡಾ॥ ಎಸ್. ವಿದ್ಯಾಶಂಕರ್ ರವರಿಗೆ ;
ಪ್ರಕಟಿಸಿ ಪ್ರಸಿದ್ಧಿಸಿದ ರಾಗಿಣಿ ಪ್ರಕಾಶನದವರಿಗೆ
ಅಂದವಾಗಿ ಮುದ್ರಿಸಿಕೊಟ್ಟ ಲಾವಣ್ಯ ಮುದ್ರಣದವರಿಗೆ

'ರಾಗಿಣಿ'
೧೬-೧೦-೧೯೭೨ ಸಾ. ಶಿ. ಮರುಳಯ್ಯ

## ಪರಿವಿಡಿ

# ೧. ಭಾಷೆ

## ೧. ಭಾಷೆ ಎಂದರೇನು ?

1.1.0 'ಭಾಷೆಯ ಬಗೆಗೆ ಮಾತನಾಡುವುದೆಂದರೆ ಮರದ ಒಲೆಯಲ್ಲಿ ಅಡುಗೆ ಮಾಡಿದಂತೆ !' ಎನ್ನುತ್ತಾನೆ ಒರ್ವ ಭಾಷಾವಿಜ್ಞಾನಿ. ಅದರರ್ಥ ಭಾಷೆಯನ್ನು ಕುರಿತ ಪ್ರಯತ್ನಗಳು ಎಷ್ಟೇ ಪ್ರಮಾಣದಲ್ಲಿದ್ದರೂ ಅವುಗಳಿಂದ ಪೂರ್ಣ ಯಶಸ್ಸು ಪ್ರಾಪ್ತವಾಗಿಲ್ಲ ; ಅವು ಭಾಷೆಯ ನಿಜದ ನೆಲೆಯನ್ನು ಭೇದಿಸಲಾಗಿಲ್ಲ ಎಂದು. 'ಭಾಷೆಯ ಹುಟ್ಟನ್ನು ತಿಳಿಯಲು ಮಾಡಿರುವ ಎಲ್ಲ ಪ್ರಯತ್ನಗಳೂ ನಿಷ್ಫಲ' ಎಂದಿದ್ದಾನೆ ಸಪೀರ್. ಭಗವಂತ ಹೇಗೊ ಭಾಷೆಯ ಮೂಲ ಹಾಗೆ. ಅದೊಂದು ಚಿದಂಬರ ರಹಸ್ಯ. ಆದರೂ ಅದರ ಬಗೆಗೆ ನಿರಂತರ ಶೋಧನೆ, ಚಿಂತನೆಗಳು ನಡೆದಿವೆ, ನಡೆಯುತ್ತಲೇ ಇವೆ. ಅವುಗಳ ಫಲವಾಗಿ ಭಾಷೆಯ ಬಾಹ್ಯರೂಪ ವನ್ನು ಅರಿಯಲು ಸಾಧ್ಯವಾಗಿದೆ. ಅದರ ಆಂತರ್ಯ ಇನ್ನೂ ನಿಗೂಢವಾಗಿದೆ.

ಮೂಲತಃ ಭಾಷೆ ಎನ್ನುವುದು ಒಂದು ಶಬ್ದವ್ಯಾಪಾರ ; ಧ್ವನಿ ಸಂಕೇತಗಳ ಮೊತ್ತ ; ಅದೊಂದು ಶ್ರೇಷ್ಠ ಅಭಿವ್ಯಕ್ತಿ ಮಾಧ್ಯಮ (Media of Expression) ; ಅದೊಂದು ಸಮರ್ಥ ಸಂವಹನ ಸಾಧನ (Communicative means) ಒಬ್ಬ ವ್ಯಕ್ತಿಯ ಹೃದಯಸ್ಥ ಭಾವಗಳನ್ನು ಮತ್ತೊಬ್ಬನಿಗೆ ಮುಟ್ಟಿಸಲು ಇರುವ ಏಕೈಕ ಉತ್ತಮೋತ್ತಮ ಸಾಧನ. ಚಿತ್ರ, ಶಿಲ್ಪ, ನೃತ್ಯ, ಸಂಗೀತ ಮೊದಲಾದ ಅಭಿವ್ಯಕ್ತಿ ಸಾಧನಗಳು ಇವೆ. ಆದರೆ ಅವೆಲ್ಲದಕ್ಕಿಂತಲೂ ಶ್ರೇಷ್ಠ ಹಾಗೂ ಪರಿಣಾಮಕಾರೀ ಸಾಧನವೆಂದರೆ ಅದು ಭಾಷೆ.

1.1.1 ಶಾಬ್ದಿಕ ಪ್ರವೃತ್ತಿ ಎಲ್ಲ ಪ್ರಾಣಿಗಳಲ್ಲಿಯೂ ಇದೆ. ನೋವು ನಲಿವು ಗಳಿಗೆ, ಹಸಿವು ಕಸುವುಗಳಿಗೆ ಅವು ಪ್ರತಿಕ್ರಿಯಿಸುತ್ತವೆ ; ತಕ್ಕಂತೆ ಉದ್ಗರಿಸುತ್ತವೆ. ಆ ಬಗೆಯ ಶಬ್ದಾಭಿವ್ಯಕ್ತಿಯ ಸಂಕೇತವೇ ಭಾಷೆ. ಇರುವೆ ಇಪ್ಪತ್ತುಕೋಟಿ ಪ್ರಾಣಿಗಳಲ್ಲೂ ಅವುಗಳದೇ ಆದ ಅಭಿವ್ಯಕ್ತಿ ಸಂಕೇತ ಇದೆ. ಆ ಸಂಕೇತವೇ ಭಾಷೆ.

ನವಿಲ ಕೇಕೆ, ಕುದುರೆ ಕೆನೆತ, ಇರುವೆಗಳು ಸಾಲಿನಲ್ಲಿ ಎದುರಾಳಿಯೊಡನೆ ಮುತ್ತಿಟ್ಟು ಮಾತನಾಡುವುದು, ಕೋಗಿಲೆಯ ಕೂಜನ, ಗೂಗೆಯ 'ಗೂಕ್', ಕರುವಿನ 'ಅಂಬಾ', ಕಾಗೆಯ 'ಕಾಕಾ', ಕೋಳಿಯ 'ಕೊಕ್ಕೊಕ್ಕೋ'-ಇವೆಲ್ಲವೂ ಒಂದರ್ಥದಲ್ಲಿ,ವಿಶಾಲಾರ್ಥ ದಲ್ಲಿ ಭಾಷೆಯ ಕಕ್ಷೆಯಲ್ಲಿ ಬರುತ್ತವೆ. ಆ ಕಾರಣದಿಂದಲೆ ಭಾಷೆ ಎನ್ನುವುದು "ಆತ್ಮವಿರುವ ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿ" ಎನ್ನುತ್ತಾನೆ ಈಸ್ಲರ್. ಅದು ಅನುಭವದ ಅಭಿವ್ಯಕ್ತಿಯೂ ಹೌದು, ಅನಿಸಿಕೆಯ ಉದ್ಗಾರವೂ ಹೌದು. ಮಾರ್ಟಿ ವ್ಯಾಖ್ಯಾನಿಸುವಂತೆ, 'ಒಂದು ಸ್ಥಿತಿಯನ್ನು ವ್ಯಕ್ತಪಡಿಸಲು ಮಾಡುವ ಉದ್ದೇಶಪೂರ್ವಕ ಧ್ವನಿಗಳ ಉಚ್ಚಾರಣೆ' ಅಂದರೆ ಯಾವುದೇ ಪ್ರಾಣಿ ಇರಲಿ ಅದರಲ್ಲಿ ಎಚ್ಚೆತ್ತ ಭಾವಕ್ಕೆ ಒಂದು ಪ್ರವೃತ್ತಿ ದೊರೆಕೊಳ್ಳುತ್ತದೆ. ಅದೇ ಭಾಷೆ.

**1.1.2** ಶಬ್ದರೂಪಿಯಾದ ಭಾಷೆ ಕೆಲವು ವೇಳೆ ಸಂಜ್ಞಾರೂಪಿಯೂ (Gensture Language) ಆಗಿರುತ್ತದೆ. ಉದಾಹರಣೆಗೆ : ಒಬ್ಬ ವ್ಯಕ್ತಿ ಮಾತನಾಡುತ್ತಿದ್ದರೆ, ಅವನ ಅಭಿಪ್ರಾಯ ಬೇರೊಬ್ಬನಿಗೆ ಒಪ್ಪಿಗೆಯಾಗದಿದ್ದರೆ ಅವನು ಸುಮ್ಮನೆ 'ಹ್ರು'ಎಂದು ಶಬ್ದಿಸಿದರೆ, ಆ ಧ್ವನಿ ಅವನ ಪ್ರತಿಭಟನೆಯ ಸೂಚಕ ವಾಗುತ್ತದೆ. ಒಬ್ಬನು ಭಾಷಣ ಮಾಡುವಾಗ ಶ್ರೋತೃ ಒಬ್ಬ ಆಕಳಿಸಿದರೆ 'ನಿನ್ನ ಭಾಷಣ ಸಾಕು ಮಾಡು' ಎಂಬ ಸೂಚನೆ. ಅಕ್ಕಪಕ್ಕದ ತೋಟದವರು ಶತ್ರುಗಳಿದ್ದು ಇಬ್ಬರೂ ಪರಸ್ಪರ ಮಾತನಾಡದಿದ್ದಾಗ, ಅಕಸ್ಮಾತ್ ಗೊತ್ತಿಲ್ಲದೆ ಒಬ್ಬ 'ಯಾರು ತೋಟದಲ್ಲಿ ?' ಎಂದು ಕೂಗಿದರೆ, ಮೊದಲೇ ಅಲ್ಲಿದ್ದ ಅವನ ಶತ್ರು 'ನಾನು' ಎಂದು ಉತ್ತರಿಸುವುದಿಲ್ಲ. ಸುಮ್ಮನೆ ಒಮ್ಮೆ ಕೆಮ್ಮುತ್ತಾನೆ. ಆ ಕೆಮ್ಮು ಮೊದಲಿಗನ ಪ್ರಶ್ನೆಗೆ ಉತ್ತರವಾಗುತ್ತದೆ. ಮೂಕರೊಡನೆ ವ್ಯವಹರಿಸುವಾಗ ಆಡುಮಾತಿಗೆ ಬೆಲೆಯಿರುವುದಿಲ್ಲ. ಕೇವಲ ಹಸ್ತವಿನ್ಯಾಸ, ಅಭಿನಯ, ಆಂಗಿಕಚಲನ, ಪ್ರದರ್ಶನ –ಇವುಗಳ ಮೂಲಕವೇ ಅಭಿವ್ಯಕ್ತಿಸಬೇಕಾಗುತ್ತದೆ. ಈ ಬಗೆಯ ಸಂಜ್ಞೆ ಸೂಕ್ಷ್ಮ ಗಳನ್ನು ಭಾಷೆ ಎಂದು ಗುರುತಿಸಬಹುದು.

**1.1.3** ಆದರೆ ಈ ಎಲ್ಲ ಸಂಜ್ಞೆ ಸಂಕೇತಗಳೂ 'ಭಾಷೆ' ಎಂಬ ಪದದ ಗೌರವಕ್ಕೆ ಪಾತ್ರ ಅಲ್ಲ. ಪಶು ಪಕ್ಷಿಗಳ ಶಬ್ದಕ್ರಿಯೆ, ಮೂಕರೊಡನಾಡುವ ಹಾವ ಭಾವವಿನ್ಯಾಸ ಇವಾವೂ 'ಭಾಷೆ' ಎನ್ನಿಸಿಕೊಳ್ಳುವುದಿಲ್ಲ. ಅವು ಅಧ್ಯಯನ ಯೋಗ್ಯ ವಾದವುಗಳೂ ಅಲ್ಲ. ಭಾಷೆ ಎನ್ನುವುದು ನಿತ್ಯವ್ಯವಹರಣೆಯ ಸಂದರ್ಭದಲ್ಲಿ ಮಾನವನಾಡುವ ಮಾತು ಮಾತ್ರ. ಅದು ಸೀಮಿತವೂ ವೈಜ್ಞಾನಿಕವೂ ಆದ ಅರ್ಥ ದಲ್ಲಿ ಸ್ವೀಕೃತವಾದ ವಸ್ತು. 'ಸ್ವಪ್ರೇರಿತ ಉಚ್ಚಾರಣೆಯ ಸಂಕೇತಗಳ ಒಂದು ವ್ಯವಸ್ಥೆಯ ಮೂಲಕ ಅನಿಸಿಕೆಗಳನ್ನು, ಭಾವಗಳನ್ನು, ಇಷ್ಟಗಳನ್ನು, ಪ್ರದಾನ

ಮಾಡಲಿರುವ, ಮಾನವನಿಗಷ್ಟೇ ನಿಷ್ಠವಾದ (ಉಸಿರಾಟ, ರಕ್ತಚಲನೆ ಮೊದಲಾದವು ಗಳಂತೆ ನೈಸರ್ಗಿಕ ಕ್ರಿಯೆ ಎನಿಸದ) ರೀತಿಯೇ ಭಾಷೆ' ಎಂಬುದಾಗಿ ಎಡ್ವರ್ಡ್ ಸಪೀರ್ (Edward Sapir), 'ಮಾನವನು ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಪಡಿಸುವ ಸಲುವಾಗಿ ರೂಪಿಸಿಕೊಂಡಿರುವ ಸಂಕೇತಗಳ ವ್ಯವಸ್ಥೆಯೇ ಭಾಷೆ' ಎಂದು ಫರ್ಡಿನೆಂಡ್ ಡಿ ಸಸೂರ್ (Ferdinand de Sanssure). ಇವರ ಹೇಳಿಕೆಗಳಲ್ಲಿ ಭಾಷೆ ಮಾನವನಿಷ್ಠ ಮಾತ್ರ ಹೊರತು ಬೇರೆಯದಲ್ಲ ಎಂಬ ಅಭಿಪ್ರಾಯ ಸ್ಪಷ್ಟವಾಗುತ್ತದೆ.

1.1.4 ಮಾತು ಧ್ವನ್ಯಂಗಗಳ ನೆರವಿನಿಂದ ಪ್ರಕಟವಾಗುವ ಧ್ವನಿಸಂಕೇತಗಳ ಸಮುದಾಯ. ಆತ್ಮನಿಚ್ಛೆಯಂತೆ ಪುಪ್ಪಸದಿಂದ ಗಾಳಿಯನ್ನು ದಬ್ಬಿದಾಗ, ಅದು ಧ್ವನಿ ಪೆಟ್ಟಿಗೆಯ ಮೂಲಕ ಹೊರ ಬರುತ್ತದೆ. ಧ್ವನಿ ಪೆಟ್ಟಿಗೆಯಲ್ಲಿ ಧ್ವನಿ ಉತ್ಪನ್ನ ವಾಗುತ್ತದೆ. ಆ ಧ್ವನಿಯನ್ನು ತನ್ನಧೀನಕ್ಕೆ ತೆಗೆದುಕೊಂಡು ನಾಲಗೆಯು ತುಟಿ, ಹಲ್ಲು, ಅಂಗಳು, ಗಲ್ಲ, ತಾಲು ಮೊದಲಾದೆಡೆಗಳನ್ನು ಮುಟ್ಟಿ ಒಂದೊಂದು ಧ್ವನಿಮಾ (Phoneme)ವನ್ನು (ಶಬ್ದ ರೂಪವನ್ನು) ಸೃಷ್ಟಿಸುತ್ತದೆ. ಇಂತಹ ಧ್ವನಿಮಾಗಳ ಒಟ್ಟಂದವೇ ಭಾಷೆ. ಆದ್ದರಿಂದ ಭಾಷೆ ಎಂಬುದು ಬರಿಯ ಶಬ್ದ ವ್ಯಾಪಾರವಲ್ಲ, ಸುವ್ಯವಸ್ಥಿತ ಶಬ್ದವ್ಯಾಪಾರ. ಒಬ್ಬ ವಕ್ತೃವಿನ ಭಾವಗಳು ಬೇರೊಬ್ಬ ಶ್ರೋತೃವಿನ ಭಾವಕಲ್ಪವನ್ನು ತಲುಪಿ, ಅಲ್ಲಿ ಗ್ರಹಣದ ಮೂಲಕ ಅಲೆಗಳನ್ನೆಬ್ಬಿಸುವ ಸಾಧನ. ದೈನಂದಿನ ವ್ಯವಹರಣೆಯ ಸಮರ್ಥ ಮಾಧ್ಯಮ. (ಅದು ಅನುಭವಗಳ ಅಭಿವ್ಯಕ್ತ ರೂಪವೂ ಹೌದು, ಅಮೂರ್ತ ಭಾವಗಳ ಮೂರ್ತ ಸ್ವರೂಪವೂ) ಹೌದು. ಅಂತೆಯೇ ಜಾಕಬ್‌ಕೋರ್ಗ್ ಹೇಳುವಂತೆ ಅದು 'ತುಂಬಾ ಕೃತಕವೂ, ಆದರೆ ಸ್ಥಿತಿ ಸ್ಥಾಪಕ (Flexibility) ಶಕ್ತಿ ಉಳ್ಳದ್ದೂ ಆದ ಅಭಿವ್ಯಕ್ತಿ ಮಾಧ್ಯಮ'

ಎರ್ಡಮನ್ (Erdmann) ಹೀಗೆ ಹೇಳುತ್ತಾನೆ : 'ಭಾಷೆ ಎನ್ನುವುದು ಅಭಿಪ್ರಾಯಗಳ ಅಭಿವ್ಯಕ್ತಿಯ ಒಂದು ವಿಧಾನ ಅಲ್ಲ, ಅದೊಂದು ರೀತಿಯ ಆಲೋಚನೆ. ಭಾಷೆ ಎನ್ನುವುದು ಒಂದು ಸಾಧನ, ಮನುಷ್ಯರಿಗೆ ವಿಶಿಷ್ಟವಾಗಿರುವ ಆಲೋಚನೆಯ ಒಂದು ಸಾಧನ ಅಥವಾ ಅಂಗ. ಇವನ ಪ್ರಕಾರ ಭಾಷೆ ಎನ್ನುವುದು ವಿವೇಚನಾಶೀಲನಾದ ಮಾನವನ ವಿಶಿಷ್ಟ ಆಲೋಚನೆಯ ಆವಿರ್ಭಾವ.

ಭಾಷೆ ಎಂಬುದು ಒಂದು ವ್ಯವಸ್ಥೆ (System). ಅದು ಧ್ವನಿ ಸಂಕೇತಗಳ ವ್ಯವಸ್ಥೆ. ನಮ್ಮ ಕಣ್ಣಿಗೆ ಕಾಣುವ ವಸ್ತುವಿಗೆ ಮತ್ತು ನಮ್ಮ ಮನಸ್ಸಿನಲ್ಲಾಗುವ ಅನಿಸಿಕೆಗಳಿಗೆ ಒಂದು ಅರ್ಥಕೊಟ್ಟು ನಾವೆಲ್ಲರೂ ಒಪ್ಪಿಕೊಂಡಿರುವ ಧ್ವನಿ ಸಂಕೇತಗಳ ವ್ಯವಸ್ಥೆ. ಇದೇ ಅರ್ಥದಲ್ಲಿ ಮೇರಿಯೋ ಎ.ಪೆಯ್ ಮತ್ತು ಫ್ರಾಂಕ್ ಗೆಯನಾರ್' 'ಮಾನವ ಗುಂಪು ಅಥವಾ ಸಮುದಾಯವೊಂದು ಯಾದೃಚ್ಛಿಕ ಸಾಂಪ್ರದಾಯಿಕ

ಅರ್ಥವುಳ್ಳ ಧ್ವನಿ ಸಂಕೇತಗಳನ್ನು ನುಡಿವ ಮತ್ತು ಕೇಳುವ ಅವಯವಗಳ ಮೂಲಕ ಪರಸ್ಪರ ಮುಟ್ಟಿಸುವ (ಸಂವಹಿಸುವ) ಒಂದು ವ್ಯವಸ್ಥೆಯೇ ಭಾಷೆ'[1] ಎಂದಿದ್ದಾರೆ. 'ಬೇಕಾದಾಗ ಸ್ವ ಇಚ್ಛೆಯಿಂದ ಉಚ್ಚರಿಸಬಹುದಾದ ಸಾಂಪ್ರದಾಯಿಕ ಧ್ವನಿ ಸಂಕೇತ ಗಳ ವ್ಯವಸ್ಥೆಯೇ ಭಾಷೆ, ಎಂದು ಎಬ್ಬಿಂಗ್‌ಹಾಸ್ (Ebbinghans) ಹೇಳಿರುವುದು ಇದೇ ಅರ್ಥದಲ್ಲಿ. ಇಂತಹ ಶಾಬ್ದಿಕ ಅಥವಾ ಧ್ವನಿ ಸಂಕೇತಗಳ ಅರ್ಥಪೂರ್ಣ ಅಭಿವ್ಯಕ್ತಿಯೇ ಭಾಷೆ.

1.1.5 ಭಾಷೆ ಎಂಬುದು ಸಂಸ್ಕೃತ ಭಾಷಾ ಶಬ್ದದ ತದ್ಭವ. ಸಂಸ್ಕೃತದ 'ಭಾಷಾ'ಕ್ಕೆ 'ಭಾಷ್' ಮೂಲಧಾತು. 'ಭಾಷ್'ಗೆ ನುಡಿ, ಉಚ್ಚರಿಸು, ಮಾತನಾಡು ಎಂಬ ಅರ್ಥಗಳಿವೆ. ಲ್ಯಾಟಿನ್‌ನ 'Lingua' ಇಂಗ್ಲಿಷ್‌ನಲ್ಲಿ Language ಆಗಿದೆ. Lingua ಕ್ಕೆ Tongue, Spoken word ಎಂಬರ್ಥಗಳಿವೆ. ಆದ್ದರಿಂದ 'ಭಾಷೆ' ಎಂಬುದು ನುಡಿರೂಪೀ ವ್ಯವಹರಣಯೋಗ್ಯ ಸಾಧನ ಎಂದು ವ್ಯಾಖ್ಯಾನಿಸಬಹುದು.

1.1.6 ಆದರೆ ಯಾವ ವ್ಯಾಖ್ಯಾನವೂ ಪರಿಪೂರ್ಣ ಅಲ್ಲ. ಯಾರ ಹೇಳಿಕೆಯೂ ಭಾಷೆಯ ನೈಜಸ್ವರೂಪವನ್ನು ಪರಿಚಯಿಸಲಾರದು. ಆದರೂ ಸ್ಟರ್ಟಿವಾಂಟ್ (Sturtevant) ಹಾಗೂ ಬ್ಲಾಕ್ ಮತ್ತು ಟ್ರಾಗರ್ (Bloc and Tragger) ಇವರ ವ್ಯಾಖ್ಯಾನಗಳು ವಸ್ತುವಿಗೆ ಸಮೀಪಗತವೂ ಅರ್ಥಪೂರ್ಣವೂ ಆದವುಗಳು. ಅದರಲ್ಲೂ ಬ್ಲಾಕ್ ಮತ್ತು ಟ್ರಾಗರ್ ಇವರ ವ್ಯಾಖ್ಯಾನ ಸರ್ವಸಮ್ಮತವಾದುದಾಗಿದೆ. ಸ್ಟರ್ಟಿವಾಂಟ್ ಹೇಳುತ್ತಾನೆ : 'ಭಾಷೆ ಎಂಬುದು ಯಾದೃಚ್ಛಿಕ ಧ್ವನಿ ಸಂಕೇತಗಳ ಒಂದು ವ್ಯವಸ್ಥೆ ; ಅದರೊಡನೆ ಒಂದು ಸಮಾಜದ ಸದಸ್ಯರು ಕ್ರಿಯಿ-ಸುತ್ತಾರೆ, ಪ್ರತಿಕ್ರಿಯಿಸುತ್ತಾರೆ' ಎಂದು, ಈ ಅಜ್ಞನ ಹೆಗಲೇರಿದವರು ಬ್ಲಾಕ್ ಮತ್ತು ಟ್ರಾಗರ್. ಅವರು ಹೇಳುತ್ತಾರೆ : 'ಭಾಷೆ ಎಂಬುದು ಯಾದೃಚ್ಛಿಕ ಧ್ವನಿಸಂಕೇತಗಳ ಒಂದು ವ್ಯವಸ್ಥೆ ; ಅದರ ಮೂಲಕ ಸಮುದಾಯವೊಂದು

---

1. Language : a system of communication by sound, i.e. through the organs of speech and hearing, among human beings of a certain group or community, using vocal symbols possessing arbitrary conventional meanings :

2. Language is a system of arbitrary vocal symbols, by which members of a society act and react.

— *Sturtevant.*

ಸಹಕರಿಸುತ್ತದೆ'[3] ಎಂದು. ಸಹಕರಿಸುವುದರ ಅರ್ಥ 'ವ್ಯವಹರಿಸುತ್ತದೆ' ಎಂದು. ಹೀಗೆ ಸ್ಟರ್ಟಿವಾಂಟ್‌ನ ಅಭಿಮತವನ್ನೇ ನಯಗೊಳಿಸಿ ಹೇಳಿದ ಬ್ಲಾಕ್ ಮತ್ತು ಟ್ರಾಗರ್ ಇವರ ವ್ಯಾಖ್ಯಾನ ವಿಶ್ವಮಾನ್ಯತೆ ಪಡೆದಿದೆ.

**1.1.7** ಭಾಷೆ ಎಂಬುದು ಒಂದು ನಿರ್ದಿಷ್ಟ ಸಮಾಜವು ಒಪ್ಪಿಕೊಂಡ, ತನ್ನ ನಿತ್ಯ ವ್ಯವಹರಣೆಯಲ್ಲಿ ಅದನ್ನು ದುಡಿಸಿಕೊಂಡ, ಯಾದೃಚ್ಛಿಕ (ಇಚ್ಛೆಯನ್ನವಲಂಬಿಸಿದ) ಧ್ವನಿ ಸಂಕೇತಗಳ ಮೊತ್ತ ಎಂಬ ಅರ್ಥವುಳ್ಳ ಬ್ಲಾಕ್ ಮತ್ತು ಟ್ರಾಗರ್‌ರವರ ವ್ಯಾಖ್ಯಾನದಲ್ಲಿ ಸ್ಥೂಲವಾಗಿ ಎರಡು ಅಂಶಗಳು ಗೋಚರಿಸುತ್ತವೆ; ಒಂದು, ಭಾಷೆ ಎನ್ನುವುದು ಯಾದೃಚ್ಛಿಕ ಧ್ವನಿಸಂಕೇತಗಳ ಒಂದು ವ್ಯವಸ್ಥೆ ; ಎರಡು, ಸಮಾಜ ಅಥವಾ ಸಮುದಾಯವೊಂದು ಅದರೊಡನೆ ಸಹಕರಿಸುತ್ತದೆ (ವ್ಯವಹರಿಸುತ್ತದೆ). ಮೊದಲನೆಯದು ಭಾಷೆಯ ರೂಪವನ್ನು ಹೇಳಿದರೆ, ಎರಡನೆಯದು ಅದರ ಕಾರ್ಯವನ್ನು ಸೂಚಿಸುತ್ತದೆ. ಅದರ ಪ್ರಕಾರ 'ಭಾಷೆ' ಎಂಬುದು ಒಂದು ವರ್ಗದ ಒಂದು ವಲಯದ ಜನರ ಇಚ್ಛೆಗನುಗುಣವಾದ ಶಬ್ದರೂಪೀ ಸಂಕೇತ. ಉದಾಹರಣೆಗೆ : ಕನ್ನಡ ಭಾಷೆಯನ್ನಾಡುವ ಒಂದು ವರ್ಗ ಒಂದು ನಿರ್ದಿಷ್ಟ ವಸ್ತುವನ್ನು 'ನೀರು' ಎಂದಿತು. ಮತ್ತೊಂದು ಅದೇ ವಸ್ತುವನ್ನು 'ಜಲ' ಎಂತಲೂ ಮಗುದೊಂದು 'ವಾಟರ್' ಎಂತಲೂ ಕರೆದುವು. ಇವೆಲ್ಲವೂ ಆ ವಸ್ತುವಿಗಿದ್ದ ಶುದ್ಧ ಅಥವಾ ಮೂಲನಾಮಗಳಲ್ಲ, ಆ ವಸ್ತುವು ತಾನು ಹುಟ್ಟುವಾಗಲೇ ಆ ಹೆಸರುಗಳ ತಲೆಪಟ್ಟಿ ಕಟ್ಟಿಸಿಕೊಂಡು ಹುಟ್ಟಿಲ್ಲ. ಅದು ಮೊದಲು ಹುಟ್ಟಿತ್ತು, ಅದನ್ನು ಒಂದೊಂದು ವಲಯದ ಜನತೆ ಒಂದೊಂದು ಹೆಸರಿಟ್ಟು ಕರೆಯಿತು.[4] ಅದು ರೂಢಿಗೆ ಬಂದು, ಅರ್ಥ ಸಂಯೋಜನೆ ಪಡೆಯಿತು. ಹೀಗೆ ರೂಪುಗೊಂಡ ಶಾಬ್ದಿಕ ಅಭಿವ್ಯಕ್ತಿಯಲ್ಲಿ ಒಂದು ವ್ಯವಸ್ಥೆ ಇದೆ. ಅದು ಅಡ್ಡಾದಿಡ್ಡಿ ರಚನೆಯಾಗುವುದಿಲ್ಲ. 'ಹಣ್ಣು ಅವನನ್ನು ತಿಂದಳು' ಎನ್ನುವುದಿಲ್ಲ. ಅಥವಾ 'ಅವನು ಹಣ್ಣನ್ನು ತಿಂದಳು' ಎಂದೂ ಹೇಳ ಬರುವುದಿಲ್ಲ ; 'ಅವನು ಹಣ್ಣನ್ನು ತಿಂದನು'

---

3. 'Language is a system of arbitrary vocal symbols, by means of which a social group co-operates'

— *Bloc and Tragger.*

4. ಒಂದು ಜನಾಂಗದ ಪರಿಸರಕ್ಕನುಗುಣವಾಗಿ ಒಂದು ಧ್ವನಿ ಮೊತ್ತ ಕಲ್ಪಿತವಾಗುತ್ತದೆ. ಆ ಧ್ವನಿಮೊತ್ತವನ್ನು ಆ ಜನಾಂಗದ ಜನವೆಲ್ಲ ಗ್ರಹಿಸಿ ಸ್ವೀಕರಿಸಿದರೆ ತೀರಿತು, ಆ ವಸ್ತುವಿಗೆ ಆ ಶಬ್ದ ರೂಢವಾಗಿ ಬರುತ್ತದೆ. ಆ ರೂಢಮೂಲ ಸಂಕೇತಗಳ ಒಟ್ಟು ಸಮೂಹವೇ –ಆ ಸಮೂಹದ ಒಂದು ವ್ಯವಸ್ಥಿತ ರೂಪವೇ –ಭಾಷೆ.

– ಜೆ.ಎಸ್.ಕುಳ್ಳಿ, ವರ್ಣನಾತ್ಮಕ ಭಾಷಾ ವಿಜ್ಞಾನ, ಪು. ೫. (೧೯೭೧)

ಎಂದೇ ಹೇಳುವುದು. ಈ ರೀತಿ ಕರ್ತೃ, ಕರ್ಮ, ಕ್ರಿಯೆಗಳಲ್ಲಿ ಕ್ರಮಬದ್ಧತೆ, ಪುಲ್ಲಿಂಗ ಸ್ತ್ರೀ ಲಿಂಗಗಳಲ್ಲಿ ವೈಜ್ಞಾನಿಕ ವಿಶ್ಲೇಷಣೆ, ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸುವಲ್ಲಿ ವಿಶಿಷ್ಟ ವಿವೇಚನೆ ಇಟ್ಟುಕೊಂಡೇ ಅಭಿವ್ಯಕ್ತವಾಗುತ್ತದೆ. ಅದು ಕೇಶಿ ರಾಜ ಹೇಳುವಂತೆ 'ನಾಮ ರೂಢಿಯಬಳಿಯದ' ರೂಪ ; ಭಾಷಾ ಮರ್ಯಾದೆ ಯನ್ನು ಕಾಪಾಡುವ ಕ್ರಮ. ಇದೇ ವ್ಯವಸ್ಥೆ.

ಎರಡನೆಯದು, ಸಮುದಾಯವೊಂದು ಅದರೊಡನೆ ವ್ಯವಹರಿಸುವುದು. ಪ್ರತಿಯೊಬ್ಬ ವ್ಯಕ್ತಿಯೂ ಒಂದೊಂದು ವಿಶಿಷ್ಟ ಸಮಾಜದ ಸದಸ್ಯನಾಗಿರುತ್ತಾನೆ. ಸಮುದಾಯ ಒಪ್ಪಿದ, ರಾಜಕಾರಣ ಅಪ್ಪಿದ, ಧರ್ಮವು ರೂಪಿಸಿಕೊಟ್ಟ ಸಮಾಜ ಸಂಹಿತೆಗಳಿಗೆ ಅವನು ಬದ್ಧನಾಗಿರುತ್ತಾನೆ. ಎಲ್ಲ ಕ್ಷೇತ್ರಗಳಲ್ಲೂ ವಿನಿಮಯಗೊಳ್ಳುವ ಭಾಷೆಯೊಡನೆ ಅವನು ರಾಜಿ ಮಾಡಿಕೊಂಡೇ ಬದುಕುತ್ತಾನೆ, ಬದುಕಬೇಕು. ಇಲ್ಲ ವಾದರೆ ಅವನ ಬದುಕಿನಬಂಡಿ ಮುಂದುವರಿಯುವುದೇ ಇಲ್ಲ, ಆದ್ದರಿಂದ ಭಾಷೆ ಸಮಾಜವೊಂದರ ಸಮರ್ಥ ಸಂವಹನ (Communicative) ಸಾಧನ. ಅದರೊಡನೆ ಸಮುದಾಯ ಸದಾ ವ್ಯವಹರಿಸುತ್ತಿರುತ್ತದೆ. ಏನಿಲ್ಲವೆಂದರೂ ಭಾಷೆ ಸಾಮಾಜಿಕನ ಪ್ರಾಥಮಿಕ ಅಗತ್ಯತೆಗಳನ್ನು ಪೂರೈಸಲು ನೆರವಾಗುತ್ತದೆ.

**1.1.8** ಮಾನವ ಪತಿತ ದೇವತೆ ಇಲ್ಲವೇ ಉತ್ಕ್ರಿಷ್ಟಿತ ಪ್ರಾಣಿ, ಅವನು ಮಾತನ್ನು ಕಂಡು ಹಿಡಿದವನು, ಮಾತು ಬಲ್ಲವನು, ಮಾತಿನ ಮಹತ್ವವನ್ನರಿತವನು. ಬೇರಾವ ಪ್ರಾಣಿಗೂ ಇರದ ತುಂಬು ಹೊಂದಾಣಿಕೆಯ ಧ್ವನ್ಯಂಗಗಳು[5] ಅವನಿಗಿವೆ, ಅವನಲ್ಲಿ ಅನುಭವಿಸುವ ಚೇತನವಿದೆ. ಅನುಭವಿಸಿದ್ದನ್ನು ಅಭಿವ್ಯಕ್ತಿಸುವ ಸಾಮರ್ಥ್ಯ ವಿದೆ. ತನ್ನ ಪರಿಸರದೊಡನೆ ಸದಾ ಸ್ಪಂದಿಸುವ, ಪ್ರತಿಕ್ರಿಯಿಸುವ, ತನ್ನನ್ನು ತಾನು ಪ್ರಕಟಿಸಿಕೊಳ್ಳುವ ವಿಶಿಷ್ಟ ಶಕ್ತಿ ಅವನಿಗಿದೆ. ಅವನು ಒಂದಲ್ಲ ಹತ್ತು ಭಾಷೆ ಗಳನ್ನು ಕಲಿಯಬಲ್ಲ ಶಕ್ತಿ ಸಂಪಾದಿಸಿಕೊಂಡಿದ್ದಾನೆ. ಅಂತಹ ಶಕ್ತಿ ಇರುವುದರಿಂದಲೆ ಅವನು ತನ್ನ ಹೃದಯಸ್ಥವಾದ ಭಾವ ಭಾವನೆಗಳನ್ನು ಚಿತ್ರ, ಶಿಲ್ಪ, ನೃತ್ಯ, ಸಂಗೀತ, ಸಾಹಿತ್ಯಾದಿ ಲಲಿತ ಕಲೆಗಳ (Fine Arts) ಮೂಲಕ ಅಭಿವ್ಯಕ್ತಿಸುತ್ತಾನೆ. ಪ್ರತಿ ಸಂದರ್ಭದಲ್ಲೂ ಅವನು ತನ್ನ ಆಲೋಚನೆಗೂ ಅಭಿವ್ಯಕ್ತಿಗೂ ಸಾವಯವ ಸಂಬಂಧವನ್ನು ಕಲ್ಪಿಸುವುದನ್ನು ಮರೆಯಲಾರ. ಅದರಿಂದಾಗಿ ದಿನ ನಿತ್ಯದ ಚಟು ವಟಿಕೆಗಳಲ್ಲೂ ಆಡುನುಡಿಯನ್ನು ಅರ್ಥವತ್ತಾಗಿ ದುಡಿಸಿಕೊಳ್ಳಬಲ್ಲ. ಆ ರೀತಿ ವ್ಯವಹರಣೆಯ ಸೌಲಭ್ಯಕ್ಕಾಗಿ ಅವನಾಡುವ ನುಡಿಯ ಶಬ್ದ ರೂಪವೇ ಭಾಷೆ.

---

5. ಕಂಠ, ನಾಲಿಗೆ, ತುಟಿ. ಹಲ್ಲು, ಅಂಗಳ(ಮೂರ್ಧನ್ಯ) ತಾಲು(ಗಲ್ಲ), ನಾಸಿಕ ಇತ್ಯಾದಿ.

## ೨. ಭಾಷೆಯ ಸ್ವರೂಪ ಮತ್ತು ಸಾಮರ್ಥ್ಯ :

**1.2.0** ಭಾಷೆ ದೈವನಿರ್ಮಿತಿ ಅಲ್ಲ ; ಅದು ಮಾನವನ ಸೃಷ್ಟಿ ; ಅವನ ನಿರಂತರ ದುಡಿಮೆಯ ಸತ್ಫಲ. ಅವನ ಅತ್ಯಮೂಲ್ಯ ಆವಿಷ್ಕಾರಗಳಲ್ಲಿ (Invensions) ಒಂದು. ಮಹಾ ವಿಜ್ಞಾನಿ ಚಾರ್ಲ್ಸ್ ಡಾರ್ವಿನ್ 'ಮಾನವ ಪ್ರಪಂಚದ ಆವಿಷ್ಕಾರ ಗಳಲ್ಲೆಲ್ಲಾ ಭಾಷೆಯ ಉಪಯೋಗೀ ಆವಿಷ್ಕಾರದಷ್ಟು ಅದ್ಭುತವಾದದ್ದು, ಮಹತ್ವ ಪೂರ್ಣವಾದದ್ದು ಬೇರೊಂದು ಇಲ್ಲ' ಎಂದಿದ್ದಾನೆ. ಇದರಿಂದ ಭಾಷೆಯ ಆವಿಷ್ಕರಣದ ಮಹತ್ವ ವೇದ್ಯವಾಗುತ್ತದೆ. ಜ್ಞಾನದ ಸಂಕೇತವೆನಿಸಿದ ಅಗ್ನಿ ಮಾನವನ ಮೊದಲ ಆವಿಷ್ಕಾರ; ಭಾಷೆ ಎರಡನೆಯದು. ಅಗ್ನಿಯ ಆವಿರ್ಭಾವದಿಂದ ಅವನಲ್ಲಿ ಜ್ಞಾನ ಅವತರಿಸಿತು ; ಭಾಷೆಯ ಒಡನಾಟದಿಂದ ಅವನಿಗೆ ಭಾವಾಭಿವ್ಯಕ್ತಿ ಸಾಧ್ಯವಾಯಿತು.

ಭಾಷೆ ಮಾನವನ ಅತ್ಯಮೂಲ್ಯ ಸಿದ್ಧಿಗಳಲ್ಲಿ ಒಂದು.

**1.2.1** ಭಾಷೆ ನೈಸರ್ಗಿಕ ಕ್ರಿಯೆ ಅಲ್ಲ, ಕಲಿತ ಕ್ರಿಯೆ, ಅಂದರೆ ಯಾವುದೇ ಪ್ರಯತ್ನವಿಲ್ಲದೆ ಉಸಿರಾಟದಂತಹ ಸ್ವಾಭಾವಿಕ ವ್ಯಾಪಾರ ಅಲ್ಲ, ಅದು ಮೂಲತಃ ಸಂಸರ್ಗ ಜನ್ಯ. ಪರಿಸರಕ್ಕನುಗುಣವಾಗಿ, ವ್ಯಕ್ತಿವ್ಯಕ್ತಿಗಳ ಸಂಸರ್ಗ ಅಥವಾ ಸಂಪರ್ಕ ವ್ಯವಹರಣೆಯಿಂದಾಗಿ ಹುಟ್ಟುತ್ತದೆ ; ಬೆಳೆಯುತ್ತದೆ. ಇದಕ್ಕೆ ಅಕ್ಬರ್ ಪ್ರಯೋಗ ವನ್ನು ಹೆಸರಿಸಬಹುದು, ಅಕ್ಬರ್ ಎಂಬವನು ಒಂದು ಮಗುವನ್ನು ಸಂಪರ್ಕ ರಹಿತ ಪ್ರದೇಶದಲ್ಲಿ ಬೆಳೆಸಿದನಂತೆ. ಅದು ಬೆಳೆದು ನಿಂತರೂ ಮಾತು ಬಾರದ ಮೂಕಪಶು ವಾಗಿತ್ತಂತೆ ! ಅದರಿಂದ ಜನಮಿಲನದಿಂದ ಭಾಷೆ ಜನನ ಎಂಬುದು ವೇದ್ಯವಾಗುತ್ತದೆ. ಭಾಷೆ ಏಕಕಾಲದಲ್ಲಿ ವ್ಯಷ್ಟಿಗತವೂ ಮತ್ತು ಸಮಷ್ಟಿಯುತವೂ ಆದ ಘಟನೆ (Phenomenun). ಪ್ರತಿಯೊಬ್ಬ ಸಾಮಾಜಿಕನ ಅಂತರ್ಯದಲ್ಲೂ ಸುಪ್ತ ಮತ್ತು ಅಭಿವ್ಯಕ್ತಿ ಸಾಮರ್ಥ್ಯವುಳ್ಳ ಶಕ್ತಿಯಾಗಿರುವುದರಿಂದ ಅದು ವ್ಯಷ್ಟಿಗತ, ಅಂತಹ ವ್ಯಕ್ತಿಗಳ ಸಮುದಾಯ ಅಥವಾ ಸಮಾಜದೊಡನೆ ಅದು ನಿಕಟ ಸಂಬಂಧ, ಸಂಪರ್ಕ, ವ್ಯವಹರಣೆ ಇಟ್ಟುಕೊಂಡು ಅಭಿಮತ ವಿನಿಮಯ ಸಾಧನವೆನಿಸಿದ್ದರಿಂದ ಆದು ಸಮಷ್ಟಿಯುತ.

**1.2.2.** ಒಂದು ಭಾಷೆ ಒಂದು ದೇಶಕ್ಕೆ, ಒಂದು ಜಾತಿಗೆ, ಒಂದು ಜನಾಂಗಕ್ಕೆ ಮೀಸಲಲ್ಲ. ಯಾವುದೇ ದೇಶದ ಯಾವುದೇ ಜನಾಂಗ ಯಾವುದೇ ಭಾಷೆಯನ್ನಾಡ ಬಹುದು. ಒಬ್ಬ ವ್ಯಕ್ತಿ ಎಷ್ಟು ಭಾಷೆಗಳನ್ನು ಬೇಕಾದರೂ ಕಲಿಯಬಹುದು, ಅಭಿಪ್ರಾಯ ವಿನಿಮಯಕ್ಕಾಗಿ ಅವುಗಳೊಡನೆ ವ್ಯವಹರಿಸಬಹುದು. ಭಾಷೆ ಇಂತಹ ಜೀವಂತಿಕೆಯನ್ನುಳ್ಳ ವಸ್ತು.

**1.2.3.** ಭಾಷೆ ನೈಸರ್ಗಿಕ ಕ್ರಿಯೆ ಅಲ್ಲ, ಆದರೆ ಆನುವಂಶಿಕವಾದುದು. ಒಂದೊಂದು ಪ್ರಾಣಿವರ್ಗಕ್ಕೂ ಅದರದೇ ಆದ ಒಂದು ಭಾಷೆ ಇರುತ್ತೆ. ಅದೇ ರೀತಿ

ಮನುಷ್ಯನಿಗೂ ಇದೆ. ಅದು ಅವನಿಗೆ ಆನುವಂಶಿಕವಾಗಿ ಬಂದದ್ದು. ಬೆಕ್ಕಿನ ಭಾಷೆ ಬೆಕ್ಕಿಗೆ ಆನುವಂಶಿಕ. ಆದರೆ ಮನುಷ್ಯನಾಡುವ ಭಾಷೆಯನ್ನು ಬೆಕ್ಕಿಗೆ ಕಲಿಸಲು ಬರುವುದಿಲ್ಲ. ಮಾನವನ ಧ್ವನ್ಯಂಗಗಳ ರಚನೆ ಅನ್ಯಪ್ರಾಣಿಗಿಲ್ಲವಾದ್ದರಿಂದ ಆಡುನುಡಿ ಮಾನವನಿಗೇ ಮೀಸಲು. ಈ ಸಂಬಂಧವಾಗಿ ಒಂದು ಕಥೆ ಇದೆ :

ಒಂದು ತೋಳ ರಾಮುವನ್ನು ಒಂದು ದಿನದ ಮಗುವಾಗಿದ್ದಾಗಿನಿಂದಲೂ ಸಾಕಿತು. ಅಲ್ಲಿ ರಾಮು ಕಲಿತದ್ದು ತೋಳನಂತೆ ಒರಲುವುದು. ಆ ರಾಮು ಜನರ ನಡುವೆ ಬಂದು ಸೇರಿದಾಗ ಅವನು ಮಾತು ಕಲಿತ, ಆಡಿದ. ತೋಳ ಕಲಿಯಲಿಲ್ಲ. ಆದ್ದರಿಂದ ಮಾತು ಆನುವಂಶಿಕ. ಭಾಷೆ ಮಾನವನನ್ನು ಅನ್ಯ ಪ್ರಾಣಿಗಳಿಂದ ಭಿನ್ನ ಎಂಬುದನ್ನು ಅಳೆಯಲು ಇರುವ ಒಂದು ಮಾಪನವೂ ಹೌದು.

1.2.4. ಭಾಷೆ ಆನುವಂಶಿಕ, ಅಷ್ಟೇ ಪರಿಸರ ಜನ್ಯ. ಸಾಮಾನ್ಯವಾಗಿ ನಿಮ್ಮ ಮಾತೃಭಾಷೆ ಯಾವುದು ಎಂದು ಕೇಳುವುದು ರೂಢಿ. 'ಮಾತೃಭಾಷೆ' ಅಂದಾಗ ಹೆತ್ತತಾಯಿಯ ಭಾಷೆಯೂ ಆಗಬಹುದು, ಹೊತ್ತ ನೆಲದ ಭಾಷೆಯೂ ಆಗಬಹುದು. ಮಗು ಎಳಮೆಯಿಂದಲೂ ತನ್ನ ತಾಯಿಯ ಸಂಪರ್ಕ ಇಟ್ಟುಕೊಂಡೇ ಬೆಳೆದಿದ್ದರೆ, ಅವಳೊಡನೆ ಸಂಭಾಷಿಸಿ ಮಾತು ಕಲಿತಿದ್ದರೆ ಮಾತ್ರ ಅದು ತಾಯಿಭಾಷೆಯಾಗುತ್ತದೆ. ಹಾಗಲ್ಲದೆ ಕನ್ನಡನವಳ ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನು ಅವಳಿಂದ ಬೇರೆ ಮಾಡಿ ಇಂಗ್ಲೆಂಡಿನಲ್ಲಿ ಬೆಳೆಸಿದರೆ ಅಲ್ಲಿ ಅದನ್ನು ಬೆಳೆಸಿದವರು ಆಡುವ ಇಂಗ್ಲಿಷ್ ಭಾಷೆಯನ್ನು ಕಲಿಯುತ್ತದೆಯೇ ಹೊರತು ಕನ್ನಡವನ್ನಲ್ಲ. ಅಂದರೆ ಪರಿಸರದ ಭಾಷೆ ಅದರ ಮಾತೃ ಭಾಷೆಯಾಗುತ್ತದೆ. ಮಾನವ ಪರಿಸರದ ಶಿಶು. ಅದು ಕೊಟ್ಟದ್ದನ್ನು ಸ್ವೀಕರಿಸುವ ಗುಣವುಳ್ಳವನಾದ್ದರಿಂದ ಪರಿಸರದ ಭಾಷೆಯನ್ನು ತನ್ನದನ್ನಾಗಿಸಿಕೊಳ್ಳುತ್ತಾನೆ.

1.2.5. ಮನುಷ್ಯನ ಹೊರತು ಮಿಕ್ಕ ಯಾವ ಪ್ರಾಣಿಗಳಿಗೂ ಆಡುನುಡಿ ತಿಳಿದಿಲ್ಲ. ಅವು ತಮ್ಮದಾದ ನಾಲ್ಕು ಅಥವಾ ಐದು ಭಾವಗಳನ್ನು ಮಾತ್ರ ಅಭಿವ್ಯಕ್ತಿಸಬಲ್ಲವು. ಮಾನವನ ಮಾನಸ ಸರೋವರದ ಭಾವದಲೆಗಳ ಲೆಕ್ಕಕ್ಕೆ ಸಂಖ್ಯೆಯೇ ಇಲ್ಲ. ಅಂತೆಯೇ ಒಂದೊಂದು ಪ್ರಾಣಿಗೂ ಒಂದೊಂದು ವಿಶಿಷ್ಟ ಗುಣವಿದ್ದರೆ, ಮಾನವನಲ್ಲಿ ಆ ಎಲ್ಲ ಪ್ರಾಣಿಗಳ ಎಲ್ಲ ಗುಣಗಳೂ ಅಡಗಿವೆ. ಪಸುವಿನಲ್ಲಿ ಸಾಧುತ್ವವಿದೆ, ಹಾವಿನಲ್ಲಿ ಸೇಡಿದೆ, ಹುಲಿಯಲ್ಲಿ ಉಗ್ರತೆಯಿದೆ, ಕಪಿಯಲ್ಲಿ ಚಪಲತೆ ಇದೆ. ನರಿಯಲ್ಲಿ ಕುತಂತ್ರ ಬುದ್ಧಿಯಿದೆ, ಕತ್ತೆಯಲ್ಲಿ ಮೂರ್ಖತೆ ಇದೆ. ಆದರೆ ಮಾನವನಲ್ಲಿ ಅವೆಲ್ಲ ಗುಣಗಳೂ ಇವೆ. ಅವನು ಎಲ್ಲ ಗುಣಗಳ ವಸ್ತು ಸಂಗ್ರಹಾಲಯ! ಭಾವಾಭಿವ್ಯಕ್ತಿಯ ಸಂದರ್ಭದಲ್ಲಿ ಪ್ರಾಣಿಗಳಲ್ಲಿ ಮಿತಿ ಇದ್ದಂತೆ ಮಾನವನಲ್ಲಿ ಇಲ್ಲ. ಅವನು ಭಾಷೆಯನ್ನು ಬಹು ವಿಧದಲ್ಲಿ ದುಡಿಸಿಕೊಳ್ಳುತ್ತಾನೆ, ಆ

ರೀತಿಯ ಮಾನವ ಬಳಕೆಯ ಭಾಷೆಗೆ ವೈಶಿಷ್ಟ್ಯಗಳು ಏಳು ಎಂಬುದಾಗಿ ಹ್ಯಾಕೆಟ್ ಹೇಳುತ್ತಾನೆ. ಅವುಗಳ ಸ್ಥೂಲ ಪರಿಚಯ ಮಾಡಿಕೊಳ್ಳೋಣ.

## 1.2.6. ದ್ವಿವಿಧತೆ (Duality) :

ವಾಕ್ ಮತ್ತು ಅರ್ಥಗಳೆರಡೂ ಜಗತ್ಪಿತರಾದ ಪಾರ್ವತೀ–ಪರಮೇಶ್ವರರಂತೆ ಅವಿನಾಭಾವಿಗಳು (Inseperable Elements) ಎಂದಿದ್ದಾನೆ ಕಾಳಿದಾಸ. ಭಾಷೆಯ ಉಚ್ಚಾರದಲ್ಲಿ ಧ್ವನಿ ಸಂಕೇತಗಳ ಮೊತ್ತ ಮತ್ತು ಅವಕ್ಕಿರುವ ಅರ್ಥ–ಇವು ಅನ್ಯೋನ್ಯ. ಒಂದು ಕಡೆ ಧ್ವನಿ ವ್ಯವಸ್ಥೆ. ಇನ್ನೊಂದು ಕಡೆ ಅರ್ಥ ವ್ಯವಸ್ಥೆ ಇದ್ದೇ ಇರುತ್ತದೆ. ಇದನ್ನು ಮನುಷ್ಯನಾಡುವ ಭಾಷೆಗಿರುವ ವೈಶಿಷ್ಟ್ಯ ಎನ್ನುತ್ತಾನೆ ಭಾಷಾ ವಿಜ್ಞಾನಿ.

ಉದಾಹರಣೆಗೆ 'ಹಸು' ಇದರಲ್ಲಿ ಹ್+ಅ+ಸ್+ಉ ಎಂಬ ನಾಲ್ಕು ಧ್ವನಿಮಾ (Phoneme) ಗಳಿವೆ. ಈ ಧ್ವನಿಮಾಗಳು ಅಥವಾ ಧ್ವನಿ ಮೊತ್ತವು ಒಗ್ಗೂಡಿ 'ಹಸು' ಎಂಬ ಒಂದು ಆಕೃತಿಮಾ (Morpheme) ಆಗುತ್ತದೆ. ಹಸು ಎಂಬುದು ಧ್ವನಿ ; ಒಂದು ನಿರ್ದಿಷ್ಟ ಪ್ರಾಣಿ ಎಂಬುದು ಅದಕ್ಕೆ ಅರ್ಥ. ಈ ಶಬ್ದಕ್ಕಿರುವ ಈ ಅರ್ಥವನ್ನು ಈ ಭಾಷೆಯನ್ನಾಡುವ ಜನ ಒಪ್ಪಿದ್ದಾರೆ ; ಒಪ್ಪಿ ಬಳಸುತ್ತಲೂ ಇದ್ದಾರೆ. ಹೀಗೆ ಮಾತು ಮತ್ತು ಅರ್ಥ ಅನ್ಯೋನ್ಯವಾಗಿ ಅಳವಟ್ಟ ಬಗೆಯನ್ನು ಭಾಷೆಯಲ್ಲಿನ ದ್ವಿವಿಧತೆ ಎನ್ನುತ್ತಾರೆ.

## 1.2.7. ಉತ್ಪಾದಕತೆ (Productivity) :

ಸಕ್ಕರೆ ಒಂದೇ ವಸ್ತುವಾಗಿದ್ದರೂ ಅದನ್ನು ಬೇರೆ ಬೇರೆ ಪದಾರ್ಥಗಳೊಂದಿಗೆ ಸಂಯೋಜಿಸಿದರೆ ಒಂದೊಂದು ಹೆಸರಿನ ಸಿಹಿ ಅಣಿಸಿಕೊಳ್ಳುತ್ತವೆ. ಅದೇ ರೀತಿ ಸಿದ್ಧ ಧ್ವನಿ ಸಂಕೇತಗಳನ್ನು ಒಗ್ಗೂಡಿಸಿಕೊಂಡು ಅರ್ಥವುಳ್ಳ ಅನೇಕ ಶಬ್ದಗಳನ್ನು ನಿರ್ಮಿಸಿಕೊಳ್ಳುತ್ತೇವೆ. ಉದಾಹರಣೆಗೆ : ಮೆಡು ಧಾತುವಿನಿಂದ ಮೆಟ್ಟು, ಮೆಟ್ಟಿಲು ಇತ್ಯಾದಿ ಶಬ್ದಗಳು ನಿಷ್ಪನ್ನವಾಗುತ್ತವೆ. ಅಂತೆಯೇ ತನ್ನಲ್ಲಿಯೇ ಇರುವ ಎರಡೆರಡು ಪದಗಳನ್ನು ಕೂಡಿಸಿ ಬೆಂಕಿ+ಪೊಟ್ಟಣ, ಸೀಮೆ+ಎಣ್ಣೆ ಇತ್ಯಾದಿ ಪದಗಳನ್ನು ಸೃಷ್ಟಿಸುತ್ತೇವೆ, ಹೀಗೆ ವಸ್ತು, ಸಂಪರ್ಕ, ಸಂದರ್ಭ ಇವುಗಳಿಗನುಗುಣವಾಗಿ ಒಂದು ಭಾಷೆಯು ತನ್ನವೇ ಆದ ಹೊಸ ಹೊಸ ಶಬ್ದಗಳನ್ನು ನಿರ್ಮಿಸಿಕೊಳ್ಳುತ್ತಾ ಹೋಗುತ್ತದೆ ; ಮತ್ತು ಅವುಗಳನ್ನು ನಿರ್ದಿಷ್ಟ ಅರ್ಥದಲ್ಲಿ ಪ್ರಾಚುರ್ಯಕ್ಕೆ ತರುತ್ತಾ ಹೋಗುತ್ತದೆ. ವಿಧಾನಸೌಧ (Legislative House), ದೂರವಾಣಿ (Telephone), ಭಯೋತ್ಪಾದಕರು (Terrorists), ಭ್ರಷ್ಟಾಚಾರ (Corruption), ರಸ್ತೆ ರೈಲು (Road Train), ದೂರವಾಣಿ ಕದ್ದಾಲಿಕೆ (Telephone Trapping) ಇತ್ಯಾದಿ ಪದಗಳು ಅಂತಹ ಪ್ರಯತ್ನದ ಫಲ.

ಇದೇ ರೀತಿ ನಾವು ಹಿಂದೆಂದೂ ಕೇಳವ ಬಳಸದ ಒಂದು ಪದವನ್ನು ಒಬ್ಬ ಪ್ರಯೋಗಿಸುತ್ತಾನೆಂದು ಇಟ್ಟುಕೊಳ್ಳೋಣ. ಅದು ಅಪರಿಚಿತವಿದ್ದರೂ ಭಾಷೆಯು ಸಾದೃಶ್ಯದಿಂದಲೊ ಅಥವಾ ಸನ್ನಿವೇಶ ಪ್ರಭಾವದಿಂದಲೊ ಅದರರ್ಥ ಗ್ರಾಹ್ಯ ವಾಗುತ್ತದೆ. ಉದಾಹರಣೆಗೆ : ಭೀಮ ಕುಪಿತನಾಗಿ ಒಮ್ಮೆ ಧರ್ಮರಾಯನಿಗೆ 'ನಿನ್ನ ನುಡಿ ಎನಗೆ ಟಠಡಢಣಂ' ಎನ್ನುತ್ತಾನೆ, ಈ 'ಟಠಡಢಣ' ಪ್ರಯೋಗ ಹೊಸದು. ಅದಕ್ಕೆ ನಿಘಂಟುವಿನಲ್ಲಿ ಅರ್ಥ ಸಿಗದು. ಆದರೆ ಕೋಪದ ಸಂದರ್ಭದಲ್ಲಿ ಬಂದಿರುವು ದರಿಂದ 'ನಿನ್ನ ಮಾತು ನನಗೆ ಮಾನ್ಯವಲ್ಲ, ನಿನ್ನಾಜ್ಞೆಯನ್ನು ನಾನು ಮೀರುತ್ತೇನೆ' ಎಂಬ ಧೋರಣೆಯನ್ನು ಅದು ಪ್ರಕಾಶಪಡಿಸುತ್ತದೆ. ಅದು ಕೇಳುಗನಿಗೆ ವೇದ್ಯವಾದರೆ ಬಳಸಿದ ಭಾಷೆ ಸಾರ್ಥಕ.

ಹೀಗೆ ಹೊಸ ಹೊಸ ಪದಗಳನ್ನೂ ಹೊಸ ಅರ್ಥಗಳನ್ನು ನಿರ್ಮಾಣಗೈವ ಭಾಷಾ ಶಕ್ತಿಯೇ ಉತ್ಪಾದಕತೆ—

## 1.2.8. ಯಾದೃಚ್ಛಿಕತೆ ಅಥವಾ ಆನುಕೂಲ್ಯ (Arbitrariness) :

ಮಾನವ ಭಾಷೆಯು ಅರ್ಥ ಪರಂಪರೆ ಅನುಕೂಲಾತ್ಮಕ (arbitrary). ಪ್ರಾಣಿಗಳ ಭಾಷೆ ಪ್ರತೀಕಾತ್ಮಕ (Iconic) ಅದರ ಕ್ಷೇತ್ರ ವಿಶಾಲ, ಇದರ ಕ್ಷೇತ್ರ ತುಂಬಾ ತುಂಬಾ ಕಿರಿದು. ಅದು ಅನೇಕ ಧ್ವನಿಮಾಗಳನ್ನು ಜೋಡಿಸಿಕೊಂಡು ಅರ್ಥ ಕಲ್ಪಿಸುತ್ತಾ ಹೋಗುತ್ತದೆ. ಆ ಸ್ವಾತಂತ್ರ್ಯ ಪ್ರಾಣಿಗಳ ಸಂಜ್ಞಾ ಭಾಷೆಯಲ್ಲಿಲ್ಲ. ಮಾನವ ತನ್ನ ಹೊಸ ಹೊಸ ಆಲೋಚನೆಗೆ ಹೊಸ ಹೊಸ ಅರ್ಥವುಳ್ಳ ಶಬ್ದಗಳನ್ನು ಸೃಷ್ಟಿಸಬಲ್ಲ, ಹೆಸರಿಸಬಲ್ಲ. ಅದು ರೂಢಿಯನ್ನು ವಿಶೇಷವಾಗಿ ಅವಲಂಬಿಸಿರುತ್ತದೆ. ಉದಾಹರಣೆಗೆ : ಇಂಗ್ಲಿಷಿನ ಗೌರ್ನಮೆಂಟ್ ಎಂಬ ಶಬ್ದಕ್ಕೆ ಕನ್ನಡಿಗರು ಸರ್ಕಾರ ಎಂತಲೂ, ತೆಲುಗರು ಪ್ರಭುತ್ವಮು ಎಂತಲೂ, ತಮಿಳರು ಅರಸು ಎಂತಲೂ ಕರೆಯುತ್ತಾರೆ. ಅದೇ ರೀತಿ ಟೆಲಿವಿಷನ್‌ಗೆ ಭಾರತೀಯರು ದೂರದರ್ಶನ ಎಂದರೆ, ಸಿಲೋನಿಗಳು ರೂಪವಾರಿಣಿ ಎನ್ನುತ್ತಾರೆ. ನಾಯಿ ಎಂಬ ಒಂದು ಪ್ರಾಣಿಗೆ ದ್ರಾವಿಡ ಭಾಷೆಗಳಾದ ಕನ್ನಡದಲ್ಲಿ ನಾಯಿ, ಪೆಂಗೊದಲ್ಲಿ ನೆಕುಡ್, ಕುವಿನಲ್ಲಿ ನೆಹುರಿ, ನಾಯ್ಕಿ ಯಲ್ಲಿ ಆತೆ, ಪರ್ಜಿಯಲ್ಲಿ ನೆತ್ತ, ಗದಬದಲ್ಲಿ ನೇತೆ, ಕೊಂಡದಲ್ಲಿ ನುಕುಡಿ ಎಂದೂ, ಇಂಡೋ-ಯೂರೋಪಿಯನ್ ವರ್ಗದ ಭಾಷೆಗಳಾದ ಸಂಸ್ಕೃತದಲ್ಲಿ ಶ್ವಾನ, ಇಂಗ್ಲಿಷ್ ನಲ್ಲಿ ಡಾಗ್, ಜರ್ಮನ್‌ನಲ್ಲಿ ಹುಂಟ್, ಹಿಂದಿಯಲ್ಲಿ ಕುತ್ತ, ಮರಾಠಿಯಲ್ಲಿ ಕುತರಾ ಎಂದೂ ಕರೆಯುತ್ತಾರೆ. ವಸ್ತು ಒಂದೇ ಆಗಿದ್ದರೂ ಅವನ್ನು ಸಂಕೇತಿಸುವ ಧ್ವನಿ ಮೊತ್ತ ಒಂದಾಗಿರುವುದಿಲ್ಲ. ಪ್ರತಿ ಸಮುದಾಯವೂ ತನಗನುಕೂಲವಾದ ರೀತಿಯಲ್ಲಿ ಧ್ವನಿಸುತ್ತಾ ಹೋಗುತ್ತದೆ.

ಹೀಗೆ ಒಂದು ಹೊಸ ವಿಚಾರ ಅಥವಾ ವಸ್ತುವಿಗೆ ಒಂದು ಧ್ವನಿಮೊತ್ತವನ್ನೂ

ಆ ಮೊತ್ತಕ್ಕೆ ತಮ್ಮ ಭಾಷಾ ಜಾಯಮಾನಕ್ಕೊಪ್ಪುವಂತಹ ಒಂದು ಅರ್ಥವನ್ನೊ ಕಲ್ಪಿಸಿದರೆ, ಅದೇ ಅರ್ಥವನ್ನು ಗರ್ಭೀಕರಿಸಿಕೊಂಡು ಆ ಪದ ರೂಢಿಗೆ ಬಂದರೆ, ಅದು ತನ್ನದಾದ ಪರಂಪರೆಯನ್ನು ನಿರ್ಮಿಸಿಕೊಂಡು ಚಲಾವಣೆ ಪಡೆಯುತ್ತದೆ. ಒಂದು ವೇಳೆ ವ್ಯಾಕರಣ ದೃಷ್ಟಿಯಿಂದಲಾಗಲಿ ಅಥವಾ ಮತ್ತಾವುದೇ ದೃಷ್ಟಿಯಿಂದಲಾಗಲಿ ದೋಷವೆನಿಸಿದ್ದಾದರೂ ಪ್ರಯೋಗದಲ್ಲಿ ಸಾಧುವೇ ಆಗಿಬಿಡುತ್ತದೆ. ಉದಾಹರಣೆಗೆ: ತೊಂಬತ್ತು, ಮತ್ತು ರೈಲು ಪದಗಳನ್ನು ನೋಡಿ. ತೊಂಬತ್ತು ಎಂಬುದು ತೊಲ್ + ಪತ್ತು = ತೊಲ್‌ಪತ್ತು, > ತೊಂಬತ್ತು ಎಂದಾಗಿದೆ, ತೊಲ್ ಅಥವಾ ತೊಲಿ ಅಂದರೆ ಮೊದಲು; ಪತ್ತು ಅಂದರೆ ಹತ್ತು. ಅದರರ್ಥ ಹತ್ತಕ್ಕೆ ಮೊದಲು '9' ಆಗಬೇಕಿತ್ತು ವ್ಯಾಕರಣದ ಪ್ರಕಾರ, ಆದರೆ ಅದು '90' ಆಗಿಬಿಟ್ಟಿದೆ. ಇದು ವ್ಯಾಕರಣದ ರೀತ್ಯಾ ದೋಷ. ಆದರೂ ರೂಢಿಯಲ್ಲಿ ಬಂದುಬಿಟ್ಟಿರುವುದರಿಂದ ಗುಣ ಆಗಿ ಪರಿಣಾಮ ಪಡೆದಿದೆ. ತಮಿಳಿನಲ್ಲಿ 90ಗೆ ತೊಣ್ಣೂರ್ ಎನ್ನುತ್ತಾರೆ. ಅದು ಸರಿಯಾಗಿದೆ. ತೊಲ್ + ನೂರ್ = ತೊಲ್‌ನೂರ್ > ತೊಣ್ಣೂರ್ ಆಗಿದೆ. ಮತ್ತೊಂದು ಶಬ್ದ ರೈಲು. ಇದರ ಇಂಗ್ಲಿಷ್ ಅರ್ಥ ಕಂಬಿ; ಆದರೆ ಕನ್ನಡದ ಬಳಕೆಯಲ್ಲಿ ಟ್ರೈನಿಗೆ ಅನ್ವಯ. ಇದೇ ರೀತಿ 'ಕೂಳ್' ಎಂಬ ಶಬ್ದ. ಹಳಗನ್ನಡದಲ್ಲಿ ಅನ್ನಕ್ಕಿದ್ದ ಕನ್ನಡ ಶಬ್ದ ಅದು. ಕಾಲಕ್ರಮೇಣ ಅರ್ಥ ಸಂಕುಚಿತಗೊಳಿಸಿಕೊಂಡು 'ಕೂಳ್' ಅನ್ನುವುದು ಸತ್ತವರ ಮನೆಯಲ್ಲಿ ತಿನ್ನುವ ಅನ್ನ ಎಂಬ ಹೀನಾರ್ಥ ಪಡೆಯಿತು. ಇದೇ ಭಾಷೆಯಲ್ಲಿನ ಯಾದೃಚ್ಛಿಕತೆ.

### 1.2.9. ವಿಶಿಷ್ಟ ಪ್ರಾವೀಣ್ಯ (Specialisation) :

ಇಂಗ್ಲಿಷ್‌ನಲ್ಲಿ He kicked his Bucket ಎಂದರಾಗಲಿ ಕನ್ನಡದಲ್ಲಿ ಅವನು 'ನೆಗೆದುಬಿದ್ದ' ಎಂದರಾಗಲಿ 'ಅವನು ಸತ್ತ' ಎಂದೇ ಅರ್ಥ. ಇದನ್ನು ವಾಚ್ಯಾರ್ಥಕ್ಕಿಂತ ಭಿನ್ನವಾದ ವ್ಯಂಗ್ಯಾರ್ಥವನ್ನು ವ್ಯಂಜಿಸುತ್ತದೆ. ಪ್ರಯೋಗಗೊಂಡ ಮೇಲಿನ ವಾಕ್ಯಗಳಿಗೂ ಅರ್ಥಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ಪ್ರಯೋಗದ ವೇಳೆಯಲ್ಲಿ ವಿಶಿಷ್ಟ ಅರ್ಥಸ್ಫುರಣಕ್ಕೆ ಸಾಧನವಾಗುತ್ತದೆ. ಹೀಗೆ ಒಂದು ಪದ ಸ್ಫೋಟಗೊಂಡ ಕೂಡಲೆ ಅನೇಕ ಅರ್ಥ ಪದರಗಳು ಬಿಚ್ಚಿಕೊಳ್ಳುತ್ತಾ ಹೊಸ ಹೊಸ ಅರ್ಥಗಳನ್ನು ಹೊಂದುತ್ತಾ ಹೋಗುವ ಸಾಮರ್ಥ್ಯ ಭಾಷೆಗಿದೆ. ಇದು ಭಾಷೆಯ ವಿಶಿಷ್ಟ ಪ್ರಾವೀಣ್ಯ.

### 1.2.10. ವಿನಿಮಯ ಗುಣ (Inter changeability) :

ಸಾಮಾನ್ಯವಾಗಿ ಒಂದು ಭಾಷೆಯನ್ನಾಡುವವನು ಅದೇ ಭಾಷೆಯನ್ನು ಕೇಳುವವನೂ ಆಗಿರುತ್ತಾನೆ. ಸೈದ್ಧಾಂತಿಕವಾಗಿ ತಾನೇ ಹೇಳುವ, ತಾನೇ ಕೇಳುವ, ಕೇಳಿದ್ದನ್ನು ಅರ್ಥಮಾಡಿಕೊಂಡು ಪ್ರತಿಯಾಗಿ ಅರ್ಥವಾಗುವಂತೆ ಉಚ್ಚರಿಸುವ

ಸಾಮರ್ಥ್ಯ ಆತನಿಗಿರುತ್ತದೆ. ಒಂದು ವೇಳೆ ಕನ್ನಡ ಮಾತನಾಡುವವನು ಮಧ್ಯೆ ಮಧ್ಯೆ 'ನಾನು ಸ್ಕೂಲ್‌ಗೆ ಹೋಗಿ ಬೇಗ ರೈಲ್ವೇ ಸ್ಟೇಷನ್ನಿಗೆ ಬರ್‍ತೀನಿ' ಅಂದರೆ ಆ ಭಾಷೆಯು ಕೇಳುಗ ಕನ್ನಡಿಗನಿಗೆ ಅರ್ಥವಾಗುತ್ತದೆ. ಕಾರಣ ಇಂಗ್ಲಿಷ್ ಬೆರೆಸಿದ ಮಾತು ರೂಢಿಯಲ್ಲಿರುವುದರಿಂದ. ಹೀಗೆ ಪರಸ್ಪರ ಧ್ವನಿ ಮತ್ತು ಅರ್ಥಗಳ **ವಿನಿಮಯ ಗುಣ** ಭಾಷೆಯದು.

## 1.2.11 ಸ್ಥಾನಪಲ್ಲಟತೆ (Displacement) :

ಭೀಷ್ಮ ಪ್ರತಿಜ್ಞೆ, ಲಕ್ಷಣರೇಖೆ, ಪ್ರೊಕ್ರೂಷ್ಟಿಯನ್ ಬೆಡ್ ಮೊದಲಾದ ನುಡಿಗಟ್ಟುಗಳನ್ನೂ, ನಂದನವನ, ಕಿನ್ನರಿಯರು, ಸ್ವರ್ಗ, ನರಕ ಮೊದಲಾದ ಕಣ್ಣಿಂದ ನೋಡದ, ಕೈಯಿಂದ ಮುಟ್ಟದ ವಸ್ತುಗಳ ಹೆಸರುಗಳನ್ನು ನಾವಾಡಿದಾಗ ಭಾಷೆಯ ಜಾಯಮಾನ ತಿಳಿದವರಿಗೆ ಅವುಗಳ ಅರ್ಥ ಸ್ಪಷ್ಟವಾಗುತ್ತದೆ. ಹೀಗೆ ಅವ್ಯಕ್ತವನ್ನೂ ವ್ಯಕ್ತವಸ್ತುವೆಂಬಂತೆ ಅರ್ಥಮಾಡಿಕೊಳ್ಳುವಂತೆಸಗುವ ಭಾಷಾಶಕ್ತಿಯೆ **ಸ್ಥಾನಪಲ್ಲಟತೆ.**

## 1.2.12 ಸಂಸ್ಕೃತಿ ವಾಹಕತೆ (Cultural Transmission) :

ಭಾಷೆ ಮೂಲತಃ ಕಲಿಕೆಯಿಂದ ಬಂದದ್ದು, ಬರುವಂಥದು, ಈ ಕಲಿಕೆ ಮಗುವಿಗೆ ಚಿಕ್ಕಂದಿನಿಂದ ಆಗುತ್ತದೆ. ತಂದೆ, ತಾಯಿ ಅಥವಾ ಅದರ ಪರಿಸರ, ಅವರಾಡುವ ಭಾಷೆ, ಭಾಷೆಯ ಅರ್ಥ ಮಹತ್ವಗಳನ್ನು ಅನಾಯಾಸವಾಗಿ ಕಲಿತು ಬಿಡುತ್ತದೆ. ಉದಾಹರಣೆಗೆ: ವೀರಶೈವರ ಮನೆಯ ಮಗು ಶರಣ ಎಂದರಾಗಲಿ, ಜೈನರ ಮನೆಯ ಮಗು ಶ್ರಾವಕ ಎಂದರಾಗಲಿ, ವೈದಿಕರ ಮನೆಯ ಮಗು ಶ್ರಾದ್ಧ ಎಂದರಾಗಲಿ ಗ್ರಹಿಸಲು ಕಷ್ಟಪಡಬೇಕಾಗಿಲ್ಲ. ಅದು ತನ್ನ ಹಿರಿಯರ ಸುಪರಿಚಿತ ಜ್ಞಾನದಿಂದ ಶೀಘ್ರವಾಗಿ ಅರ್ಥ ಮಾಡಿಕೊಳ್ಳಬಲ್ಲುದು. ಅದೇ ರೀತಿ ಮಗ ದೊಡ್ಡವನಾದಮೇಲೆ ತನ್ನ ಮಕ್ಕಳಿಗೆ ಅದೇ ಅರ್ಥಗ್ರಹಣ ಶಬ್ದಗಳನ್ನು ಕಲಿಸುತ್ತಾನೆ, ರೂಢಿಗೆ ತರುತ್ತಾನೆ. ಹೀಗೆ ಇದು ತಲತಲಾಂತರದವರೆಗೆ ರೂಢಿಗತವಾಗುತ್ತಾ ಹೋಗುತ್ತದೆ. ಭಾಷೆ ವಹಿಸುವ ಈ ಹೊಣೆಯನ್ನು **'ಸಂಸ್ಕೃತಿ ವಾಹಕತೆ'** ಎನ್ನುತ್ತೇವೆ.

ಈ ಏಳೂ ಬಗೆಯ ಸಾಮರ್ಥ್ಯಗಳು ಮಾನವನಾಡುವ ಭಾಷೆಗೆ ಮಾತ್ರ ಇರಲುಸಾಧ್ಯ. ಬೇರಾವ ಪ್ರಾಣಿಗೂ ಸಲ್ಲದ ಕೊಡುಗೆ ಮಾನವನಿಗೆ. ಮಾನವ 'ಮಾನವ'ನಾದದ್ದು ಮಾತಿನಿಂದ. ಇಂದು ಭಾಷೆಯೇ ಇಲ್ಲದ ಮಾನವ ಸಮಾಜವನ್ನು ಊಹಿಸಿಕೊಳ್ಳುವುದೂ ಕಷ್ಟ. ಮಾನವ ಜೀವನದಲ್ಲಿ ಭಾಷೆ ವಹಿಸುವ ಪಾತ್ರ ಅತ್ಯಂತ ಮಹತ್ತ್ವದ್ದು. ಅದು ಅವನ ಬದುಕಿನ ಮೇಲೆ ತುಂಬು ಪ್ರಭಾವ ಬೀರಿದ ಏಕೈಕ ಶಕ್ತಿ. ಅದು ಮೂಲತಃ ಒಂದು ಪ್ರಮುಖ ಸಾಮಾಜಿಕ ಕ್ರಿಯೆ.

ಅದು ವ್ಯಕ್ತಿ-ವ್ಯಕ್ತಿಯನ್ನು, ವ್ಯಕ್ತಿ-ಸಮಾಜವನ್ನೂ ಬೆಸೆಯುವ ಸಾಧನ. ವ್ಯಕ್ತಿಯು ತನ್ನ ವಿಶಿಷ್ಟ ವ್ಯಕ್ತಿತ್ವವನ್ನು ಪ್ರದರ್ಶಿಸಿ, ಸಮಾಜವೊಂದರ ಕ್ರಿಯಾಶೀಲ ಸದಸ್ಯನಾಗಲು ಅವನಿಗೆ ನೆರವಾಗುವ ನೇಹಿಗ. ನುಡಿಯ ರೂಪದಲ್ಲೊ ಲಿಪಿಯ ರೂಪದಲ್ಲೊ ಅಮೂರ್ತ ಭಾವಗಳಿಗೆ ಮೂರ್ತರೂಪ ಕೊಡುವುದರಿಂದ ಅದು ಸಮರ್ಥ ಸಂಸ್ಕೃತಿ ವಾಹನ. 'ಮಾತೇ ಮುತ್ತು ಮಾತೇ ಮೃತ್ಯು' ಎಂಬುದು ಗಾದೆ. ಮಾತಿನ ಮಹತ್ವವರಿತು ಅದನ್ನು ಪ್ರಯೋಗಿಸಬೇಕು ಎಂಬುದು ಅದರ ಅರ್ಥ. ಮಾತು ಮಾತಲ್ಲ 'ಮಾತು ಜ್ಯೋತಿರ್ಲಿಂಗ'. !

## ೩. ಭಾಷಾ ವರ್ಗೀಕರಣ : (The classification of Language)

**1.3.0** ಪ್ರಮುಖ-ಕ್ಷುಲ್ಲಕ, ಜೀವಂತ-ಮೃತ, ಲಿಪಿಯುಳ್ಳ-ಲಿಪಿಯಿರದ ಎಷ್ಟೆಷ್ಟೋ ಭಾಷೆಗಳಿವೆ ಈ ಜಗತ್ತಿನಲ್ಲಿ, ಅವುಗಳಲ್ಲಿ ಗ್ರಂಥಗಳಲ್ಲಿ ಮಾತ್ರ ಉಳಿದು ವ್ಯವಹರಣೆಯಲ್ಲಿಲ್ಲದ ಸಂಸ್ಕೃತ, ಹೀಬ್ರೂ, ಗ್ರೀಕ್, ಲ್ಯಾಟಿನ್ ಮೊದಲಾದ ಮೃತ ಭಾಷೆಗಳೂ ಇವೆ. ತುಳು, ಲಂಬಾಣಿ, ಕೊಂಕಣಿ ಮೊದಲಾದ ಆಡುಭಾಷೆಗಳೂ ಇವೆ. ಕಾಲಚಕ್ರಕ್ಕೆ ಸಿಕ್ಕು ಹಲವು ಅಳಿದಿರುವುದೂ ಉಂಟು. ಉದಾಹರಣೆಗೆ 17ನೆಯ ಶತಮಾನದಲ್ಲಿತ್ತೆಂದು ಹೇಳಲಾದ ಪ್ರಷ್ಯಿಯನ್ ಭಾಷೆ ; 19ನೆಯ ಶತಮಾನದಲ್ಲಿದ್ದ ಡಾಲ್ಮಟಿಯನ್ ಭಾಷೆ. ಡಾಲ್ಮಟಿಯನ್ ಭಾಷೆಯನ್ನಾಡುತ್ತಿದ್ದ ಒಬ್ಬನೇ ಒಬ್ಬವ್ಯಕ್ತಿ ಇದ್ದನಂತೆ. ಅವನು ಆ ಭಾಷೆಯ ಕಟ್ಟಕಡೆಯ ವ್ಯಕ್ತಿಯಾಗಿದ್ದು 1898ರಲ್ಲಿ ಗಣಿ ಆಸ್ಫೋಟದಲ್ಲಿ ಕೊನೆಯುಸಿರೆಳೆದನಂತೆ. ಅವನ ಜೊತೆಯಲ್ಲಿ ಆ ಭಾಷೆಯೂ ಸತ್ತು ಹೋಯಿತು. ರಾಜಕೀಯ ಕಾರಣದಿಂದಾಗಿ ಆಫ್ರಿಕ, ಉತ್ತರ ಅಮೇರಿಕೆಗಳ ಮೂಲನಿವಾಸಿಗಳಾಡುತ್ತಿದ್ದ ಭಾಷೆಗಳು, ಕೆಲವೇಜನ ದ್ರಾವಿಡರು ಹರಪ್ಪ-ಮೊಹೆಂಜದಾರೊ ಭೂ ಭಾಗಗಳಲ್ಲಿದ್ದು ಇಂದು ಪಾಕೀಸ್ತಾನಕ್ಕೆ ಸೇರಿರುವ ಬ್ರಾಹುಈ ಭಾಷೆ - ಇವು ಮಾಯವಾಗುತ್ತಿದೆ. ದ್ರಾವಿಡ ಭಾಷೆಯ ಮೂಲ ಸ್ವರೂಪಗಳನ್ನುಳ್ಳ ಈ ಬ್ರಾಹುಈ ಭಾಷೆಯನ್ನು ಉಚ್ಚರಿಸಿದರೆ ನಾಲಗೆ ಸೀಳುವುದಾಗಿ ಪಾಕೀಸ್ತಾನದ ಆಜ್ಞೆ ಇದೆಯಂತೆ ! ಆ ಭಾಷಾ ಅಧ್ಯಯನಕ್ಕೆ ಹೊರಗಿನವರಿಗೆ ಅವಕಾಶವಿಲ್ಲವಂತೆ. ಒಂದು ಭಾಷೆಯನ್ನು ನಾಶಪಡಿಸಿದರೆ ಒಂದು ಸಂಸ್ಕೃತಿ ಮತ್ತು ಒಂದು ಜನಾಂಗ ನಾಶವಾಗುತ್ತದೆ ಎಂಬುವಕ್ಕೆ ಇದೊಂದು ನಿದರ್ಶನ. ಏನೇ ಇರಲಿ ಪ್ರಪಂಚದಲ್ಲಿ ಭಾಷೆಗಳು ಸುಮಾರು ಮೂರು ಸಾವಿರಕ್ಕೂ ಮಿಕ್ಕು ಇವೆ ಎಂದು ಭಾಷಾ ವಿಜ್ಞಾನಿಗಳು ಹೇಳುತ್ತಾರೆ.

**1.3.1** ಇಷ್ಟು ಸಂಖ್ಯೆಯ ಭಾಷೆಗಳು ಒಂದೇ ರೂಪದವುಗಳಲ್ಲ. ಒಂದೇ ಸ್ವರೂಪದವುಗಳೂ ಅಲ್ಲ. ಒಂದೊಂದರಲ್ಲೂ ಒಂದೊಂದು ವೈಶಿಷ್ಟ ಇದ್ದೇ ಇರುತ್ತದೆ. ಅದನ್ನು ಗುರುತಿಸಿ, ವಿಭಜಿಸಿ, ವಿಶ್ಲೇಷಿಸಿ ತೋರಿಸಲು ಭಾಷೆಗಳನ್ನು

ಕುರಿತ ಒಂದು ಸಮಗ್ರ ವೈಜ್ಞಾನಿಕ ಅಧ್ಯಯನದ ಅಗತ್ಯತೆ ಇತ್ತು. ಅದನ್ನು ಪೂರೈಸುವ ಸಲುವಾಗಿ ಭಾಷೆಯನ್ನು ಕುರಿತ ಆ ಅಧ್ಯಯನದ ಅನುಕೂಲಕ್ಕಾಗಿ ಭಾಷಾ ವಿಜ್ಞಾನಿಗಳು ಭಾಷೆಗಳ ವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಂಡು ಕೆಲವು ಮಾಪನಗಳನ್ನು ಮುಂದಿಟ್ಟರು. ಅವುಗಳಲ್ಲಿ ಪ್ರಮುಖವಾದವುಗಳು ನಾಲ್ಕು :

೧) ಭೌಗೋಳಿಕ ವರ್ಗೀಕರಣ (Geographical Classification)

೨) ಜಾನಾಂಗಿಕ ವರ್ಗೀಕರಣ (Racial Classification)

೩) ಪ್ರಾರೂಪಕ ವರ್ಗೀಕರಣ (Typological Classification)

೪) ವಾಂಶಿಕ ವರ್ಗೀಕರಣ (Geneological Classification)

1.3.2 ಒಂದು ದೇಶ ಅಥವಾ ಒಂದು ರಾಷ್ಟ್ರದ ಜನರಾಡುವ ಭಾಷೆಗಳನ್ನು ಒಂದು ಗುಂಪಾಗಿ ಮಾಡುವುದು ಭೌಗೋಳಿಕ ಭಾಷಾ ವರ್ಗೀಕರಣ. ಇದು ಒಂದು ಬಗೆಯ ಕಲಸು ಮೇಲೋಗರ ! ಏಕೆಂದರೆ ಒಂದು ದೇಶದಲ್ಲಿ ಜನರಾಡುವ ಹಲವು ಭಾಷೆಗಳು ಒಂದೇ ಜಾಯಮಾನಕ್ಕೆ ಸೇರಿದವುಗಳೇನಲ್ಲ. ಅಂಥವನ್ನು ಕೂಡಿಸಿ ಒಂದು ವೇದಿಕೆಯ ಮೇಲೆ ತಂದಿರಿಸುವುದು ವೈಜ್ಞಾನಿಕ ವಿಂಗಡಣೆ ಎಂದೆನಿಸುವುದಿಲ್ಲ. ರೂಪ ಸ್ವರೂಪಗಳಲ್ಲಿ ಒಂದೊಂದೂ ಒಂದೊಂದು ಜಾತಿ, ಒಂದೊಂದರದೂ ಒಂದೊಂದು ನೀತಿ. ಇಂತಹ ವಿಭಜನೆ ಸಾಧುವಲ್ಲ. ಭಾರತದಂತಹ ಸಂಕೀರ್ಣ ರಾಷ್ಟ್ರದಲ್ಲಿನ ಭಾಷೆಗಳೆಲ್ಲವನ್ನೂ ಒಂದು ವರ್ಗವಾಗಿ ಮಾಡುವುದರಲ್ಲಿ ಅರ್ಥವಿರುವುದಿಲ್ಲ. ಇದೇ ಸ್ಥಿತಿ ಆಫ್ರಿಕಾಖಂಡದ ಭಾಷೆಗಳಿಗೂ ಉತ್ತರ ಅಮೇರಿಕೆಯ ಭಾಷೆಗಳಿಗೂ ಉಂಟು. ಅಲ್ಲಿನ ಭಾಷೆಗಳನೇಕವು ಭಿನ್ನ ಮೂಲಗಳುಳ್ಳವಾದ್ದರಿಂದ ಭೌಗೋಳಿಕವಾಗಿ ವಿಂಗಡಿಸಿಕೊಂಡು ಭಾಷೆಗಳನ್ನು ಅಧ್ಯಯನ ಮಾಡುವುದು ಅಸಮರ್ಪಕವೂ ಹೌದು, ಅಸಾಂಗತ್ಯವೂ ಹೌದು, ಒಂದುವೇಳೆ ಮಾಡಿದರೆ ಅದು ದೋಷಪೂರ್ಣ ವಿಂಗಡಣೆಯಾಗುತ್ತದೆ.

1.3.3 ಎರಡನೆಯದು, ಜಾನಾಂಗಿಕ ವರ್ಗೀಕರಣ. ಆರ್ಯನ್ ಅಥವಾ ಇಂಡೋ-ಯೂರೋಪಿಯನ್ ಭಾಷೆ, ತುರೇನಿಯನ್ ಅಥವಾ ಸಿಥಿಯನ್ ಭಾಷೆ ಮತ್ತು ಸೆಮಿಟಿಕ್ ಭಾಷೆ – ಎಂದು ಮೂರು ಜನಾಂಗದ ಆಧಾರದ ಮೇಲೆ ಮೂರು ವರ್ಗಗಳಾಗಿ ವಿಂಗಡಿಸಿದರು. ಆದರೆ ಇದೂ ಸಹ ಅಷ್ಟು ಸಮರ್ಪಕ ವರ್ಗೀಕರಣ ಆಗಲಿಲ್ಲ. ಏಕೆಂದರೆ ಈ ಮೂರು ಭಾಷಾವರ್ಗಗಳಿಗೆ ಸೇರದ ಭಾಷೆಗಳು ಎಷ್ಟೋ ಇವೆ. ಅವುಗಳಿಗೆ ಮೇಲೆ ಹೇಳಿದ ಜನಾಂಗವೇ ಇಲ್ಲವಾದ್ದರಿಂದ ಜಾನಾಂಗಿಕ ವರ್ಗೀಕರಣ ಅರ್ಥಹೀನ. ಎರಡನೆಯದಾಗಿ, ಆಫ್ರಿಕೆಯಲ್ಲೊ ಅಮೇರಿಕೆಯಲ್ಲೊ ಇರುವ ಒಂದು ಜನಾಂಗ ಅಂದಿನಿಂದ ಇಂದಿನವರೆಗೂ ಅದೇ ಭಾಷೆಯನ್ನಾಡುತ್ತಿದ್ದಾರೆಂಬ ಭರವಸೆ ಇಲ್ಲ. ಅವರು ವಲಸೆಹೋದರೆ ಹೋದೆಡೆಯ ಭಾಷೆಯನ್ನು ಕಲಿತು ತಮ್ಮ

ಮೂಲ ಭಾಷೆಯನ್ನು ಮರೆಯುತ್ತಾರೆ. ಇಲ್ಲವೆ ತಾವು ಇದ್ದೆಡೆಯಲ್ಲೇ ಇದ್ದರೂ ಪ್ರಬಲಶಕ್ತಿಗಳಾದ ಅನ್ಯಭಾಷೆಗಳ ಪ್ರಭಾವಕ್ಕೊಳಗಾದಾಗ ತಮ್ಮ ತಾಯಿನುಡಿಯನ್ನೇ ಸಂಪೂರ್ಣವಾಗಿ ಮರೆಯುವ ಸಂಭವ ಇದೆ. ಇಂದು ನೀಗ್ರೊ ಜನಾಂಗ ತಮ್ಮದಾದ ಭಾಷೆಯನ್ನೇ ಮರೆತು ಇಂಗ್ಲಿಷ್‌ಗೆ ಮಾರು ಹೋಗಿರುವುದನ್ನು ಕಾಣಬಹುದು.

ಒಂದು ಭಾಷೆಗೆ ಬಾಹ್ಯ ಮತ್ತು ಆಂತರಿಕ ಎಂದು ಎರಡು ವಲಯಗಳಿರುತ್ತವೆ. ದಿನಬಳಕೆಯ ಪದಗಳು, ಶರೀರದ ಅಂಗಾಂಗಗಳ ಹೆಸರುಗಳು, ಒಟ್ಟಿನಲ್ಲಿ ಭಾಷಾಕೋಶದ ಶಬ್ದಗಳನ್ನೇ ಗಣಿಸಿದರೆ ಅದು ಬಾಹ್ಯ (ಹೊರಮೈ) ಎನಿಸುತ್ತದೆ. ವ್ಯಾಕರಣಾಂಶಗಳನ್ನೊಳಗೊಂಡ ರಚನೆ ಆಂತರಿಕ (ಒಳಮೈ). ಇವೆರಡನ್ನೂ ದೃಷ್ಟಿಯಲ್ಲಿಟ್ಟುಕೊಂಡು ಎಫ್.ವಿ.ಶ್ಲೆಗೆಲ್, ಎಂ.ಡಬ್ಲ್ಯು ಶ್ಲೆಗೆಲ್ ಮತ್ತು ಶ್ಲೀಷರ್ ವರ್ಗೀಕರಿಸಿದರು. ಅವರ ಪ್ರಕಾರ,

(i) ವಿವಿಕ್ತ (Isolating) ಭಾಷಾವರ್ಗ ; ಚೀನೀಭಾಷೆ
(ii) ಅಂಟು (Agglutinative) ಭಾಷಾವರ್ಗ ; ಟರ್ಕಿಷ್
(iii) ಪ್ರಾತ್ಯಯಿಕ (Inflectional) ಭಾಷಾವರ್ಗ : ಇಂಡೋ–ಯೂರೋಪಿಯನ್ ಮತ್ತು ಅರೇಬಿಕ್ ಮೊದಲಾದ ಸೆಮಿಟಿಕ್ ಭಾಷೆಗಳು.
(iv) ಬಹುಪದಯುಕ್ತ (Poly-synthetic) ಭಾಷಾವರ್ಗ : ಉತ್ತರ ಅಮೆರಿಕೆಯ ಭಾಷೆಗಳು.
(v) ಅಂತರ್ಗಮಕ (Incorporating) ಭಾಷಾವರ್ಗ : ಬಾಸ್ಕ್ ಭಾಷೆ (Basque)

**1.3.4** ಮೊದ ಮೊದಲು ಈ ರಾಚನಿಕ ಅಥವಾ ಪ್ರಾರೂಪಕ ವರ್ಗೀಕರಣವು, ಕೆಲವು ವಿದ್ವಾಂಸರ ಆಸಕ್ತಿ ಕೆರಳಿಸಿದ್ದರೂ, ಬಹುಕಾಲ ಭದ್ರವಾಗಿ ಉಳಿಯಲಿಲ್ಲ. ಪ್ರಪಂಚದ ಎಲ್ಲ ಭಾಷೆಗಳನ್ನೂ ಈ ಐದು ವರ್ಗಗಳಲ್ಲಿ ಅಳವಡಿಸಲು ಸಾಧ್ಯವಿಲ್ಲ ಎಂಬುದು ಅರಿವಿಗೆ ಬಂತು. ಮಿಗಿಲಾಗಿ ಒಂದು ಭಾಷೆಯ ರಚನಾಕ್ರಮ ಮತ್ತೊಂದು ಭಾಷೆಯಲ್ಲೂ ಇರುವ ಸಾಧ್ಯತೆಗಳಿವೆ. ಉದಾಹರಣೆಗೆ ಚೀನೀ ಭಾಷೆಯ ಕೆಲವು ವೈಲಕ್ಷಣ್ಯಗಳು ಇಂಗ್ಲಿಷ್ ಭಾಷೆಯಲ್ಲೂ ಇವೆ. ಹಾಗೆಂದು ಅಂಟು ಭಾಷೆಯಾದ ಇಂಗ್ಲಿಷ್‌ನ್ನು ವಿವಿಕ್ತ ಭಾಷೆಯಾದ ಚೀನೆಯೊಡನೆ ಸಮೀಕರಿಸಿ, ವರ್ಗ ರೂಪಿಸಲು ಬರುವುದಿಲ್ಲ. ಆದ್ದರಿಂದ ರಾಚನಿಕ ಭಾಷಾವರ್ಗೀಕರಣವೂ ದೋಷಮುಕ್ತ ಅಲ್ಲ.

**1.3.5** ನಾಲ್ಕನೆಯದು, ವಾಂಶಿಕ ವರ್ಗೀಕರಣ. ಇದು ಹೆಚ್ಚು ಸಮರ್ಪಕ ಮತ್ತು ಬಹುಜನ ಸ್ವೀಕೃತ. ಸ್ಥೂಲ ಅವಲೋಕನಕ್ಕೆ ಹೊರನೋಟಕ್ಕೆ

ಕೆಲವು ಭಾಷೆಗಳು ಭಿನ್ನವೆಂದು ತೋರಿಸಿದರೂ, ಮೂಲದಲ್ಲಿ ಒಂದೇ ಆಗಿರುವುದ
ಕಂಡುಬರುತ್ತದೆ. ಒಂದು ಕಾಲದಲ್ಲಿ ಒಂದು ಪ್ರದೇಶದಲ್ಲಿ ಒಂದು ಸಮುದಾಯ
ಆಡುತ್ತಿದ್ದ ಭಾಷೆ, ಜನಸಂಖ್ಯೆ ಹೆಚ್ಚಿದ ಕಾರಣ ಬೇರೊಂದು ಪ್ರದೇಶಕ್ಕೆ ವಲ
ಹೋಗಿ, ನೆಲೆಸಿ ತಮ್ಮ ಪೂರ್ವಜರು ಆಡುತ್ತಿದ್ದ ಭಾಷೆಯನ್ನ ಮರೆತು ಅಥವ
ಆ ಭಾಷೆಗೆ ತಾವು ಹೊಸಾಹುತಗಳಲ್ಲಿ ಕಲಿತ ಸ್ಥಳೀಯ ಭಾಷೆಯನ್ನು ಬೆರೆಸಿ, ಭಿ
ರೂಪೀ ಭಾಷೆಯನ್ನು ನಿರ್ಮಿಸಿಕೊಂಡಿರಬಹುದು. ಇಲ್ಲವೆ ಪ್ರಕೃತಿ ಕಾರಣದಿಂದಾ
ಅಂದರೆ ಒಂದು ದೊಡ್ಡ ನದಿ ಅಡ್ಡಬಂದರೆ, ಬೆಟ್ಟವೊಂದು ಅಡ್ಡಲಾಗಿ ಮಲಗಿದ್ದ
ಅವರ ಆಚೆ-ಈಚೆ ಕಡೆಯ ಜನರಲ್ಲಿ ಸಂಪರ್ಕ ಏರ್ಪಡದೆ, ಪ್ರಾದೇಶಿಕ ಪೃಥ
ದಿಂದಾಗಿ, ಅವರಿಬ್ಬರೂ ಮೂಲನೆಲೆಯಲ್ಲಿ ಆಡುತ್ತಿದ್ದ ಮೂಲಭಾಷೆಯ ಸಂಪಕ
ಕಳೆದುಕೊಂಡು, ತತ್ ಪರಿಣಾಮವಾಗಿ ಭಿನ್ನ ಭಾಷೆಗಳಂತೆ ಬೆಳೆಯಬಹುದ
ಇಂಥವುಗಳಿಗೆ ಉಪಭಾಷೆಗಳು (Dialects) ಎಂದು ಕರೆಯುತ್ತಾರೆ. ಉದಾಹರಣೆ
ಕನ್ನಡ, ತೆಲುಗು, ತಮಿಳು, ಮಲೆಯಾಳಂ, ತುಳು ಮೊದಲಾದ ಭಾಷೆಗಳ
ಮೂಲತಃ ಒಂದು ತಾಯಿ ಭಾಷೆಯ ಮಕ್ಕಳಾಗಿದ್ದು ಕ್ರಮೇಣ ಘಟ್ಟ, ಪ್ರವಾ
ಮೊದಲಾದವುಗಳಿಂದಾಗಿ ಅಥವಾ ರಾಜಕೀಯ ವಿಭಜನೆಯ ಕಾರಣದಿಂದಾಗಿ ಪ್ರತ್ಯೇ
ಗೊಂಡು ಸ್ವತಂತ್ರ ಭಾಷೆಗಳಾದವು. ಈರೀತಿ ಉಪಭಾಷೆಗಳೇ ಕಾಲಾನುಕ್ರಮದ
ಸ್ವತಂತ್ರ ಭಾಷೆಗಳಾಗಿ ತಮ್ಮ ತಮ್ಮ ವೈಶಿಷ್ಟ್ಯಗಳನ್ನು ಬೆಳೆಸಿಕೊಳ್ಳುವುದರಿಂ
ಸ್ಥೂಲ ನೋಟಕ್ಕೆ ಇವು ಒಂದು ಭಾಷೆಗೆ ಸೇರಿದವುಗಳೆಂದು ಹೇಳುವುದು ಕಷ್ಟವಾಗ
ತ್ತದೆ. ಆದರೆ ಇವುಗಳಿಗೆ ಮೂಲಭಾಷೆ (Proto Language) ಒಂದಿದೆ. ಅದ
ಮಾತೃ-ಪಿತೃಭಾಷೆ (Parent-Language). ಅದರ ಮಕ್ಕಳು, ಮೊಮ್ಮಕ್ಕಳ
ಮರಿಮಕ್ಕಳುಗಳ ರೂಪದಲ್ಲಿ ಹತ್ತಾರು ಉಪಭಾಷೆಗಳು ಹುಟ್ಟಿಕೊಳ್ಳುತ್ತವ
ಇಂತಹ ಜ್ಞಾತಿ ಭಾಷೆಗಳ ವರ್ಗವನ್ನು ಭಾಷಾವಂಶ, ಅಥವಾ ಭಾಷಾಕುಟುಂ
ಅಥವಾ ಭಾಷಾ ಪರಿವಾರ ಎಂದು ಕರೆಯುತ್ತಾರೆ.

ಮನುಷ್ಯರಲ್ಲಿ ರಕ್ತ ಸಂಬಂಧೀ ಕುಟುಂಬವಿದ್ದಂತೆ ಈ ಸೋದರ ಭಾಷೆಗಳಲ್ಲ
ಬಾಹ್ಯ ಮತ್ತು ಆಂತರಿಕ ಸಂಬಂಧಗಳಿರುತ್ತವೆ, ಪರಸ್ಪರ ಸಾಮ್ಯತೆಗಳಿರುತ್ತವ
ಈ ಭಾಷಾ ಪರಿವಾರ (Language Family) ವನ್ನು 'A group of languag
derive from the same parent language'[6] ಎಂದು ಸರಳವಾಗಿ ವ್ಯಾಖ್ಯಾನ
ದ್ದಾರೆ ಮೆರಿಯೊ ಎ ಪೇಯ್ ಮತ್ತು ಫ್ರಾಂಕ್‌ಗೇಯ್ನರ್.

ಒಂದು ಮೂಲಭಾಷೆಯಿಂದ ಹುಟ್ಟಿ ಬೆಳೆದುಬಂದ ಉಪಭಾಷೆಗಳ
ಸಾವಿರಾರು ವರ್ಷಗಳು ಉರುಳಿದ ಮೇಲೆ ಸ್ವತಂತ್ರ ಭಾಷೆಗಳಾಗುತ್ತವಷ್ಟೆ. ಅಂ
ಗುವ ಹೊತ್ತಿಗೆ ಅವೆಲ್ಲವಕ್ಕೂ ತಮ್ಮ ತಾಯಿಭಾಷೆ ಮರೆತೇ ಹೋಗಿರುತ್ತ

6. A. Dictionary of Linguistics.

ಆದರೆ ಅವೆಲ್ಲವೂ ಆ ತಾಯಿಯ ಕೆಲವು ಕಲ್ಯಾಣ ಗುಣಗಳನ್ನು ತಮ್ಮಲ್ಲಿ ಉಳಿಸಿಕೊಂಡೇ ಇರುತ್ತವೆ, ಇದನ್ನು ಗುರುತಿಸಿ ಒಂದು ವರ್ಗವಾಗಿ ವಿಂಗಡಿಸುವುದೇ ವಾಂಶಿಕ ಭಾಷಾವರ್ಗೀಕರಣ.

ಒಂದೇ ಭಾಷಾ ಪರಿವಾರಕ್ಕೆ ಸೇರಿದ ಭಾಷೆಗಳು ಬೇರೆ ಬೇರೆಡೆಗಳಲ್ಲಿ ಬೇರೆ ಬೇರೆ ರೂಪು ತಳೆದಿದ್ದರೂ ಅವುಗಳಲ್ಲಿ ಬಾಹ್ಯ ಮತ್ತು ಆಂತರಿಕ ಸಾಮ್ಯತೆ ಇದ್ದೇ ಇರುತ್ತದೆ. ಅಂದರೆ ಬಾಹ್ಯದಲ್ಲಿ ದಿನ ಬಳಕೆಯ ಶಬ್ದಗಳು, ಸಾಮಾನ್ಯಕ್ರಿಯೆಗೆ ಸಂಬಂಧಿಸಿದ ಪದಗಳು, ಸಂಖ್ಯೆ, ಸರ್ವನಾಮಗಳು, ಗುಣವಚನಗಳು, ಸಂಬಂಧ ಸೂಚಕ ಶಬ್ದಗಳು ಇತ್ಯಾದಿಗಳಲ್ಲಿ ಸಾಮ್ಯತೆ ಕಂಡುಬಂದರೆ ಅವು ಒಂದು ಭಾಷಾ ಕುಟುಂಬಕ್ಕೆ ಸೇರಿದವುಗಳು ಎಂದು ಹೇಳಬಹುದು.

ಉದಾಹರಣೆಗೆ :

| ಕನ್ನಡ | ತಮಿಳು | ಮಲೆಯಾಳಂ | ತೆಲುಗು |
|---|---|---|---|
| ಕೈ | ಕೈ | ಕೈ | ಚೈ |
| ಕಣ್ಣು | ಕಣ್ | ಕಣ್ | ಕನ್ನು |
| ಅಣ್ಣ | ಅಣ್ಣ್ಳ | ಅಣ್ಣ | ಅನ್ನ |
| ತಮ್ಮ | ತಂಬಿ | ತಮ್ಮಿ | ತಮ್ಮುಡು |
| ಎರಡು | ಇರೆಂಡು | ರಂಡು | ರೆಡ್ಡು |
| ಅವರು | ಅವರ್ | ಅವರ್ | ವಾರು |

ಈ ಬಗೆಯ ವಾಂಶಿಕ ವರ್ಗೀಕರಣದ ಆಧಾರದ ಮೇಲೆ ಸುಮಾರು ಮೂವತ್ತೈದು ಭಾಷಾ ಪರಿವಾರಗಳನ್ನು ರೂಪಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳು ಹೀಗಿವೆ :

### 1.3.6. (i) ಇಂಡೊ-ಯುರೋಪಿಯನ್ ಭಾಷಾವರ್ಗ :

ಇದು ಪ್ರಪಂಚದ ಬಹು ದೊಡ್ಡ ಭಾಷಾ ಪರಿವಾರ. ಇದರಲ್ಲಿ ಇಂಗ್ಲಿಷ್, ಜರ್ಮನ್, ಡಚ್ ಮೊದಲಾದ ಜರ್ಮ್ಯಾನಿಕ್ ಭಾಷೆಗಳೂ, ಫ್ರೆಂಚ್, ಪೋರ್ಚುಗೀಸ್, ಸ್ಪ್ಯಾನಿಷ್, ಇಟ್ಯಾಲಿಯನ್ ಮೊದಲಾದ ರೊಮಾನ್ ಭಾಷೆಗಳೂ, ರೂಸಿ, ಪೋಲಿಷ್ ಮೊದಲಾದ ಸ್ಲಾವಿಕ್ ಭಾಷೆಗಳೂ, ವೆಲ್ಷ್, ಐರಿಷ್ ಮೊದಲಾದ ಕೆಲ್ಟಿಕ್ ಭಾಷೆಗಳೂ, ಪರ್ಷಿಯನ್, ಅಫ್ಘನ್ ಮೊದಲಾದ ಇರ್ಯಾನಿಯನ್ ಭಾಷೆಗಳೂ, ಪ್ರಾಕೃತ, ಸಂಸ್ಕೃತ, ಪಾಲಿ, ಹಿಂದಿ, ಬಂಗಾಳಿ, ಮರಾಠಿ, ಅಸ್ಸಾಮಿ, ಗುಜರಾತಿ, ಸಿಂಹಳಿ ಮೊದಲಾದ ಇಂಡೋ ಆರ್ಯನ್ ಭಾಷೆಗಳೂ ಮತ್ತು ಹಿಟ್ಟೈಟ್ ಭಾಷೆ ಮೊದಲಾದವು ಸೇರುತ್ತವೆ.

**(ii) ಫಿನ್ನೋ-ಉಗ್ರಿಕ್ ಭಾಷಾವರ್ಗ :**

ಫಿನ್ನಿಷ್, ಹಂಗೇರಿಯನ್ ಭಾಷೆಗಳು.

**(iii) ಆಲ್ಟೈಯಿಕ್ ಭಾಷಾವರ್ಗ :**

ಟರ್ಕಿಷ್, ಮಂಗೋಲಿಯನ್ ಮೊದಲಾದ ಭಾಷೆಗಳು.

**(iv) ಬಾಸ್ಕ್ ಭಾಷಾವರ್ಗ :**

ಫ್ರಾನ್ಸ್, ಸ್ಪೆಯಿನ್ ದೇಶಗಳ ಪಶ್ಚಿಮದಲ್ಲಿನ ಕೆಲವು ಜನರಾಡುವ ಭಾಷೆಗಳು.

**(v) ಅಫ್ರೋ-ಏಷಿಯಟಿಕ್ ಭಾಷಾವರ್ಗ :**

ಹೀಬ್ರು, ಅರೇಬಿಕ್ ಮೊದಲಾದ ಸೆಮಿಟಿಕ್ ಭಾಷೆಗಳೂ, ಈಜಿಪ್ಷಿಯನ್, ಬರ್ಬರ್ (ಉತ್ತರ ಆಫ್ರಿಕ,ಸಹರಾಗಳಲ್ಲಿ ಆಡುವ ಭಾಷೆ) ಮತ್ತು ಹೈಮೆಟಿಕ್ ಭಾಷೆಗಳು.

**(vi) ನೈಜರ್-ಕಾಂಗೊ ಭಾಷಾವರ್ಗ :**

ಆಫ್ರಿಕಾದ ಗೋಲ್ಡ್‌ಕೋಸ್ಟ್, ಐವರಿಕೋಸ್ಟ್, ನೈಜೀರಿಯದ 'ಕ್ವ' ಶಾಖೆಯ ಭಾಷೆಗಳೂ, ದಕ್ಷಿಣ ಆಫ್ರಿಕದ ಸ್ವಹಿಲಿ, ಕೊಂಗೊ, ಲುಬ ಮೊದಲಾದ ಬಂಟು ಶಾಖೆಯ ಭಾಷೆಗಳು.

**(vii) ಸೈನೊ-ಟಿಬೆಟಿಯನ್ ಭಾಷಾವರ್ಗ :**

ಟಿಬೆಟೊ-ಬರ್ಮನ್ ಭಾಷೆಗಳು, ಚೈನೀಸ್ ಮತ್ತು ಅದಕ್ಕೆ ಸಂಬಂಧಿಸಿದ ಹಲವು ಭಾಷೆಗಳು.

**(viii) ದ್ರಾವಿಡ ಭಾಷಾವರ್ಗ :**

ಕನ್ನಡ, ತೆಲುಗು, ತಮಿಳು, ಮಲೆಯಾಳಂ ಎಂಬ ಗ್ರಾಂಥಿಕ ಭಾಷೆಗಳು (cultivated languages) ಬ್ರಾಹುಈ, ಗದಬ, ಗೊಂಡಿ, ಕೋಟ, ಕೊಡಗು, ಕುಲಾಮಿ, ಕುರುಟ, ಮಾಲ್ತೊ, ನಾಯ್ಕಿ, ಪರ್ಜಿ, ತೊದ, ತುಳು ಮೊದಲಾದ ನಿಗ್ರಾಂಥಿಕ ಭಾಷೆಗಳು (uncultivated languages).

**(ix) ಮಲೆಯೋ-ಪಾಲಿನೇಷಿಯನ್ ಭಾಷಾವರ್ಗ :**

ಮಲೆಯ, ಇಂಡೋನೇಷಿಯನ್, ಜಾವಾನೀಸ್, ಪಾಲಿನೇಷಿಯನ್ ಮೊದಲಾದ ಭಾಷೆಗಳು.

(x) ಆಸ್ಟ್ರೇಲಿಯನ್ ಭಾಷಾವರ್ಗ :

ಮತ್ತು

(xi) ಆಸ್ಟ್ರೋ-ಏಷಿಯಾಟಿಕ್ ಭಾಷಾವರ್ಗ :

ಮಧ್ಯ ಭಾರತ ಮತ್ತು ಅಸ್ಸಾಮಿನ ಗಿರಿಪ್ರದೇಶಗಳಲ್ಲಿ ಆಡುವ ಸಾಂತಾಲಿ, ಖಸಿ, ನಿಕೋಬಾರ್ ದ್ವೀಪದ ನಿಕೊಬರಿಸ್ ಮೊದಲಾದ ಭಾಷೆಗಳು.

(xii) ಎಸ್ಕಿಮೊ-ಅಲೆಂಟ್ ಭಾಷಾವರ್ಗ :

ಎಸ್ಕಿಮೊಗಳ ಭಾಷೆ.

# ೨. ದ್ರಾವಿಡ ಭಾಷೆಗಳು

## 2.1.0. ದ್ರಾವಿಡರು :

ಭಾರತ ಒಂದು ಮಿನಿ ಪ್ರಪಂಚ. ಇಲ್ಲಿ ವಿಭಿನ್ನ ಜಾತಿ, ಜನಾಂಗ, ಧರ್ಮ, ಸಂಸ್ಕೃತಿಗಳಿರುವಂತೆ ವಿಶಿಷ್ಟ ಭಾಷಾ ಕುಟುಂಬಗಳಿವೆ. ಪ್ರಧಾನವಾಗಿ : (i) ಇಂಡೋ–ಯುರೋಪಿಯನ್ ಪರಿವಾರದ ಇಂಡೋ–ಆರ್ಯನ್ ಗುಂಪು. (ii) ಆಸ್ಟ್ರೋ–ಏಷಿಯಾಟಿಕ್. (iii) ಸೈನೋ–ಟಿಬೆಟನ್ ಪರಿವಾರದ ಟಿಬೆಟೋ –ಬರ್ಮನ್ ಗುಂಪು. (iv) ದ್ರಾವಿಡ. (v) ಅವರ್ಗೀಕೃತ ಭಾಷೆಗಳು.

ಇವುಗಳಲ್ಲಿ ದ್ರಾವಿಡ ನಮಗಿಂದು ಅಧ್ಯಯನಪಾತ್ರ. ಇದು ಭರತಖಂಡದಲ್ಲಿರುವ ಬಹು ದೊಡ್ಡ ಭಾಷಾ ಪರಿಹಾರ. ಇಂಡೋ–ಯುರೋಪಿಯನ್/ಆರ್ಯನ್ ಭಾಷಾ ಕುಟುಂಬ ಮೊದಲನೆಯದಾದರೆ, ವ್ಯಾಪ್ತಿಯಲ್ಲಿ ದೀಪ್ತಿಯಲ್ಲಿ ದ್ರಾವಿಡ ಭಾಷಾ ಪರಿವಾರ ಎರಡನೆಯದು. ಸುಮಾರು ಇಪ್ಪತ್ತು ಕೋಟಿ ಜನರ ತಾಯಿನುಡಿ ಇದಾಗಿದೆ.

'ದ್ರಾವಿಡ' ಶಬ್ದವು ಜನಾಂಗವಾಚಿಯೆ? ಭಾಷಾವಾಚಿಯೆ? ಅಥವಾ ಪ್ರದೇಶ ವಾಚಿಯೆ? ಈ ಬಗ್ಗೆ ಇನ್ನೂ ನಿರ್ಧಾರ ಆಗಿಲ್ಲ. ಆದರೂ ಜನಾಂಗವಾಚಿ ಎನ್ನಲು ಹೆಚ್ಚು ಆಕ್ಷೇಪಣೆ ಇರಲಾರದು. ದ್ರಾವಿಡರಾಡುವ ಭಾಷೆ ದ್ರಾವಿಡ, ಹಾಗಾದರೆ ದ್ರಾವಿಡರು ಯಾರು? ಎಂಬ ಪ್ರಶ್ನೆ ತನ್ನ ಸೊಂಡಿಲೆತ್ತಿ ನಿಲ್ಲುತ್ತದೆ. ಇದಕ್ಕೆ ಸಮಂಜಸವಾದ ಉತ್ತರ ಸಿಕ್ಕಿಲ್ಲ. ದ್ರಾವಿಡರು ಭಾರತದ ಮೂಲನಿವಾಸಿಗಳೆ ಅಥವಾ ಬೇರೆಡೆಯಿಂದ ಭಾರತಕ್ಕೆ ವಲಸೆ ಬಂದವರೆ? ಈ ಪ್ರಶ್ನೆಗೆ ಬಹುತೇಕ ವಿದ್ವಾಂಸರ ಉತ್ತರ ವಲಸೆ ಬಂದವರು ಎಂದು. ಆದರೆ ದ್ರಾವಿಡರು ಭಾರತದ ಮೂಲನಿವಾಸಿಗಳು, ವಲಸೆ ಬಂದವರಲ್ಲ ಎಂಬ ವಾದವೂ ಇದೆ. ಸುಮಾರು ಕ್ರಿ.ಪೂ. ಐದು ಸಾವಿರ ವರ್ಷಗಳ ಹಿಂದೆಯೇ ದ್ರಾವಿಡರು ಮೆಡಿಟರೇನಿಯನ್ ತೀರ ದಿಂದ ಮೆಸಪಟೇಮಿಯಾ ಮಾರ್ಗವಾಗಿ ಅಂದರೆ ಇಂದಿನ ಇರಾನ್, ಇರಾಕ್ ಮಾರ್ಗ

ವಾಗಿ ವಾಯುವ್ಯ ಕಣಿವೆಗಳ ಮೂಲಕ ಭಾರತಕ್ಕೆ ವಲಸೆ ಬಂದವರು ಎಂಬ ಊಹೆ ಸತ್ಯಕ್ಕೆ ಹೆಚ್ಚು ಹತ್ತಿರವಾದದ್ದು. ಹಾಗೆ ಬರುವಾಗ ತಮ್ಮ ಮಾತೃ ಸ್ಥಳದ ಅಂದರೆ ಮೆಡಿಟರೇನಿಯನ್ ಪ್ರದೇಶದ ಕೆಲವು ಕಲ್ಯಾಣ ಗುಣಗಳನ್ನೂ, ಮಾರ್ಗದಲ್ಲಿನ ಇರಾನ್, ಇರಾಕ್‌ಗಳ ಹಲವು ನಾಗರಿಕ ಅಂಶಗಳನ್ನೂ ಬಳುವಳಿಯಾಗಿ ಪಡೆದು ಬಂದಿರಬೇಕು. ಹಾಗೆ ಬಂದವರು ಕ್ರಿ.ಪೂ. ೧೫೦೦ ರಿಂದ ೫೦೦ರ ವರೆಗಿನ ಅವಧಿಯಲ್ಲಿ ಸಿಂಧೂ ನದಿಯ ಬಯಲಿನಲ್ಲಿ ತಮ್ಮ ವೈಭವದ ಜೀವನ ಸಾಗಿಸಿದ್ದಿರಬೇಕು. ಅನಂತರ ಏಷ್ಯಾಮೈನರ್‌ನಿಂದ ಬಂದ ಆರ್ಯರೊಡನೆ ದ್ರಾವಿಡರು ಸಂಪರ್ಕ ಪಡೆದರು. ಉಭಯತ್ರರಲ್ಲೂ ಹೆಣ್ಣು ಗಂಡಿನ ಕೊಳ್‌ಕೊಡುಗೆ ಆರಂಭವಾಗಿ ಒಂದು ವಿನೂತನ ಸಂಸ್ಕೃತಿ ರೂಪುಗೊಂಡಿತೆನ್ನಬಹುದು. ದ್ರಾವಿಡರ ಮೂಲ ಸಂಸ್ಕೃತಿಯ ಕುರುಹುಗಳು ಹರಪ್ಪ–ಮೊಹೆಂಜೊದಾರೊಗಳಲ್ಲಿ ದೊರೆತರೆ, ಆರ್ಯ–ದ್ರಾವಿಡ ಸಮ್ಮಿಶ್ರಣ ಸಂಸ್ಕೃತಿಯ ಅವಶೇಷಗಳು ಲೋಥೆಲ್‌ನಲ್ಲಿ ದೊರೆಯುತ್ತವೆ.

ಇದು ಒಂದು ವಾದ. ಮತ್ತೊಂದು ವಾದ ಒಂದಾನೊಂದು ಕಾಲದಲ್ಲಿ ಆಫ್ರಿಕಾ ಮತ್ತು ಇಂಡಿಯಾ ಅವಿಭಾಜ್ಯ ಭೂಭಾಗವಾಗಿದ್ದವು. ಕಾಲಾನಂತರ ಅವೆರಡರ ನಡುವೆ ಸಮುದ್ರ ಪ್ರವೇಶಿಸಿ ಆಫ್ರಿಕಾ, ಇಂಡಿಯಾ ಎಂದು ಎರಡು ಭಾಗಗಳನ್ನಾಗಿ ಮಾಡಿತು ಎಂದು ಭೂವಿಜ್ಞಾನಿಗಳು ಹೇಳುತ್ತಾರೆ. ಅದಕ್ಕೆ ಆಫ್ರಿಕಾ ಮತ್ತು ಭಾರತಗಳೆರಡರ ಮಣ್ಣು, ಸಸ್ಯವರ್ಗ, ಆನೆ ಮೊದಲಾದ ಪ್ರಾಣಿಗಳು, ಕಪ್ಪು ಬಣ್ಣ, ದಪ್ಪ ತುಟಿ, ಗುಂಗುರು ಕೂದಲಿನ ಚಹರೆಯುಳ್ಳ ಮನುಷ್ಯವರ್ಗ – ಇವೆಲ್ಲ ಸಾಮ್ಯತೆಗಳನ್ನು ಸೂಚಿಸುತ್ತಾರೆ. ಆದರೆ ದಕ್ಷಿಣ ಆಫ್ರಿಕಾದ ಮೂಲನಿವಾಸಿಗಳ ಭಾಷೆ ಮತ್ತು ಭಾರತದ ಮೂಲ ದ್ರಾವಿಡ(Proto Dravidiān) ಭಾಷೆ – ಇವುಗಳಿಗಿರುವ ಸಾಮ್ಯತೆಯ ಬಗೆಗೆ ವಿಶೇಷ ಅಧ್ಯಯನ ನಡೆಯುತ್ತಿದೆ.[7] ಅದು ಪೂರ್ಣಗೊಂಡಾಗ ದ್ರಾವಿಡ ಮತ್ತು ನೀಗ್ರೋಗಳ ಮೂಲಬಾಂಧವ್ಯ[8] ಸ್ಪಷ್ಟವಾಗುತ್ತದೆ.

ಮೆಡಿಟರೇನಿಯನ್ ಭೂಭಾಗ, ಆಫ್ರಿಕಾ ಮತ್ತು ಭರತಖಂಡ – ಇವುಗಳಿಗೆ ಸಾಂಸ್ಕೃತಿಕ ಸಹಭಾಗಿತ್ವ ಇದ್ದಂತೆ ಭಾಷಾ ಬಾಂಧವ್ಯವೂ ಇದ್ದುದು ರುಜುವಾತಾದರೆ ದ್ರಾವಿಡರು ಹೊರಗಿನಿಂದ ಬಂದವರಾಗುವುದಿಲ್ಲ. ಇಲ್ಲಿಯೇ ಇದ್ದ

---

7. ಡಾ॥ ಯು.ಪಿ.ಉಪಾಧ್ಯಾಯ Dravidian and Negro-African, International Journal of Dravidian Linguistics, Vol V, No. 1, January-1976, p.p. 62-64.

8. ಡಾ॥ ಸಾ.ಶಿ. ಮರುಳಯ್ಯ, ಮಸಿಪಾ, ಪು. ೨೮.

ಸಮುದ್ರದ ಕಾರಣದಿಂದಾಗಿ ಆಫ್ರಿಕಾ ಬೇರ್ಪಟ್ಟ ಮೇಲೆ ಉಳಿದ ಭೂಭಾಗವಾದ ಭರತಖಂಡದ ಮೂಲನಿವಾಸಿಗಳಾಗಿ ಇದ್ದಿರಬಹುದು. ಆಗ ಭಾರತಕ್ಕೆ ವಲಸೆ ಬಂದವರೆಂದು ಹೇಳುವ (1) ನೀಗ್ರೋ ಜನಾಂಗ, (2) ಆಸ್ಟ್ರಿಕ್ ಜನಾಂಗ, (3) ದ್ರಾವಿಡ ಜನಾಂಗ, (4) ಆರ್ಯ ಜನಾಂಗ, (5) ಮಂಗೋಲಿಯನ್ ಜನಾಂಗ– ಈ ಪೈಕಿ ನೀಗ್ರೋ ಮತ್ತು ದ್ರಾವಿಡರು ಬೇರೆಯಾಗುತ್ತಾರೆ. ಅವರೇ ಇಂಡಿಯಾ ಮತ್ತು ಆಫ್ರಿಕಾಗಳು ಕೂಡಿದ್ದ ವಿಶಾಲ ಭೂಭಾಗದ ಆದಿನಿವಾಸಿಗಳಾಗುತ್ತಾರೆ. ಆಸ್ಟ್ರಿಕ್, ಆರ್ಯ ಮತ್ತು ಮಂಗೋಲಿಯನ್ನರು ಭಾರತಕ್ಕೆ ಹೊರಗಿನಿಂದ ವಲಸೆ ಬಂದವರಾಗುತ್ತಾರೆ. ಅನಾದಿಕಾಲದಿಂದಲೂ ಆಸೇತು ಹಿಮಾಚಲದವರೆಗೆ ವ್ಯಾಪಕ ವಾಗಿ ಬದುಕು ಮಾಡಿದ ಜನ ನೀಗ್ರೋ ಮಾದರಿಯ ದ್ರಾವಿಡರು. ಹರಪ್ಪ- ಮೊಹೆಂಜದಾರೊಗಳಲ್ಲಿನ ಸೈಂಧವ ಸಂಸ್ಕೃತಿ ಇವರದು.

2.1.1. ಅಸ್ಸಾಂ ಮಾರ್ಗವಾಗಿ ಭಾರತಕ್ಕೆ ವಲಸೆ ಬಂದವರು ಆಸ್ಟ್ರಿಕ್ ಜನರು. ಮುಂಡಾ ಅಥವಾ ಕೋಲ್ ಗುಂಪಿನ ಜನರಾದ ಇವರು ಮುಂಡಾ ಅಥವಾ ಕೋಲ್ ವರ್ಗದ ಭಾಷೆಗಳನ್ನಾಡುತ್ತಾರೆ. ವೇದಗಳಲ್ಲಿ ಇವರನ್ನು 'ನಿಷಾದ'ರೆಂದು ಕರೆಯಲಾಗಿದೆ. ಮಧ್ಯ ಹಾಗೂ ಪೂರ್ವ ಭಾರತದ ಗುಡ್ಡಗಾಡುಗಳಲ್ಲಿರುವ ಇವರು ಸಂತಾಲಿ, ಮುಂಡಾರಿ, ಹೊ, ಖಿರ್‌ಹಲ್, ಶಬರ, ನಿಕೋಬಾರಿ, ಭೂಮಿಜ್‌ಖಾಸಿ, ಕೊರ್ಗು ಮೊದಲಾದ ಭಾಷೆಗಳನ್ನಾಡುತ್ತಾರೆ. ಇವರಾದ ಮೇಲೆ, ಸುಮಾರು ಕ್ರಿ.ಪೂ. ೨೦೦೦ ವರ್ಷಗಳ ಹಿಂದೆ ಆರ್ಯರು ಏಷ್ಯಾ ಮೈನರ್‌ನಿಂದ ವಾಯುವ್ಯ ಕಣಿವೆಗಳ ಮಾರ್ಗವಾಗಿ ಬಂದು, ಸಿಂಧೂ ನದಿಯ ಬಯಲಿನಲ್ಲಿದ್ದ ದ್ರಾವಿಡರನ್ನು ಓಡಿಸಿ ಕಡೆಗೆ, ಅವರೊಡನೆ ರಕ್ತ ಸಂಬಂಧ ಬೆಳೆಸಿ ಭಾರತದಲ್ಲಿ ಉಳಿದರು. ಮುಂದೆ ಕ್ರಿ.ಪೂ. ಅಥವಾ ಕ್ರಿ.ಶ.ದ ಆದಿಯಲ್ಲಿ ಬಂದವರು ಮಂಗೋಲಿಯನ್ ಬುಡಕಟ್ಟಿ ನವರು. ಇವರು ಭಾರತದ ಈಶಾನ್ಯ ದಿಕ್ಕಿನಿಂದ ಇಳಿದು ಅಲ್ಲಿನ ಗುಡ್ಡಗಾಡುಗಳಲ್ಲಿ ನೆಲೆ ನಿಂತರು. ಬಂಗಾಳ, ನೇಪಾಳ, ಅಸ್ಸಾಂ, ಬಿಹಾರ್ ಪ್ರದೇಶಗಳಲ್ಲಿ ವಾಸಿಸು ತ್ತಿರುವವರು ಇವರೆ. ಇಷ್ಟಾದರೂ ಆರ್ಯ ಮತ್ತು ದ್ರಾವಿಡ ಎರಡೇ ಭಾರತದ ಬಹು ವ್ಯಾಪಕ ಜನಾಂಗಗಳು. ಸಂಸ್ಕೃತ ಮತ್ತು ಸಂಸ್ಕೃತಜನ್ಯ ಭಾಷೆಗಳು, ದ್ರಾವಿಡ ಮತ್ತು ದ್ರಾವಿಡಜನ್ಯ ಭಾಷೆಗಳು ಅವರಾಡುವ ಬಹು ದೊಡ್ಡ ಭಾಷಾ ಪರಿವಾರಗಳು.

## 2.1.2. ದ್ರಾವಿಡ ಭಾಷೆಗಳು

'ದ್ರಾವಿಡ' ಎಂಬುದು ಆರ್ಯರು ಕೊಟ್ಟ ಹೆಸರು. ಜನ ದ್ರಾವಿಡ ರಾದರೂ 'ದ್ರಾವಿಡ' ಎಂಬ ಪದ ದ್ರಾವಿಡ ಅಲ್ಲ. ಅದು ಸಂಸ್ಕೃತ ಶಬ್ದ. ಹಾಗಾದರೆ ಇದರ ಮೂಲ ರೂಪ ಯಾವುದಿದ್ದಿರಬಹುದು ಎಂಬ ಬಗ್ಗೆ ಊಹೆಗಳು

ಉರುಳಿವೆ. ತಮಿಳಿನ ತಿರಮಿಡ–ತಿರವಿಡ–ದ್ರಮಿಡ–ದ್ರವಿಡ–ದ್ರಾವಿಡ ಆಗಿರಬಹುದು ಎನ್ನುತ್ತಾರೆ ಭಾಷಾ ವಿಜ್ಞಾನಿಗಳು. ಅಂತೆಯೇ ಗ್ರೀಕರು ದಮಿರ್ಝ್–ತಮಿರಝ್ ಎನ್ನುತ್ತಾರೆ. ತಮಿರ್ಝ್ ಇಂದಿನ ತಮಿಳ್. ಈ ತಮಿಳ್ ಸಂಕುಚಿತಾರ್ಥದಲ್ಲಿ 'ತಮಿಳು' ಎಂತಲೂ ವಿಶಾಲಾರ್ಥದಲ್ಲಿ ಇಡೀ ದ್ರಾವಿಡ ಭಾಷಾ ವರ್ಗವನ್ನೊಳಗೊಂಡುದೆಂತಲೂ ಹೇಳುತ್ತಾರೆ. ಬ್ರಿಟಿಷರು ಭಾರತಕ್ಕೆ ಬಂದು ನೆಲೆಸಿ ಭಾಷಾಭ್ಯಾಸ ಮಾಡಿದ ಮೇಲೆ 'ದ್ರಾವಿಡ' ಭರತಖಂಡದ 'ಮೂಲ ದ್ರಾವಿಡ' ಭಾಷೆಯೆಂಬ ವಿಶಾಲಾರ್ಥದಲ್ಲಿ ಉಳಿಯಿತು.

ದ್ರಾವಿಡ ಜನಾಂಗ ಸಿಂಧೂ ನದಿಯ ಬಯಲಿನಲ್ಲಿದ್ದಾಗ ಆಡುತ್ತಿದ್ದ ಭಾಷೆಯನ್ನು ಮೂಲ ದ್ರಾವಿಡ (Proto-Dravidian) ಎಂದು ಕರೆದರು. ಜನಸಂಖ್ಯೆ ಹೆಚ್ಚಿ ಉತ್ತರದಿಂದ ದಕ್ಷಿಣ ಭಾರತದ ಕಡೆಗೆ ಬಂದಾಗ ಹಲವು ಉಪಭಾಷೆಗಳಾಗಿ (Dialects) ಒಡೆಯಿತು. ಆ ಉಪಭಾಷೆಗಳೇ ಕಾಲಕ್ರಮೇಣ ಸ್ವತಂತ್ರ ಭಾಷೆಗಳಾಗಿ ಇಂದು ಅಧ್ಯಯನ ಯೋಗ್ಯವಾದವುಗಳಾಗಿವೆ. ಈ ದ್ರಾವಿಡ ಭಾಷೆಗಳು ಸುಮಾರು ಎಪ್ಪತ್ತೈದು ಇವೆ ಎಂದು ಅಂದಾಜು ಮಾಡಲಾಗಿದೆ. ಅವುಗಳಲ್ಲಿ ಇಪ್ಪತ್ತೈದು ಪ್ರಮುಖ ಭಾಷೆಗಳು (Major Languages), ಐವತ್ತು ಕ್ಷುಲ್ಲಕ ಭಾಷೆಗಳು (Minor Languages), ಸಧ್ಯಕ್ಕೆ ಎಪ್ಪತ್ತಮೂರು ದ್ರಾವಿಡ ಭಾಷೆಗಳ ಹೆಸರುಗಳನ್ನು ಕೊಡಲಾಗಿದೆ. ಆದರೂ ಇನ್ನೂ ಸಂಶೋಧನೆಗೆ ಸಿಗಬಹುದಾದ ಸಾಧ್ಯತೆಗಳೂ ಇವೆ. ಇವುಗಳಲ್ಲಿ ಬ್ರಾಹುಈ ಒಂದು ಮಾತ್ರ ಪಾಕೀಸ್ತಾನದಲ್ಲಿದೆ. ಉಳಿದವೆಲ್ಲವೂ ಭಾರತೀಯ ಭಾಷೆಗಳು.

## ಅ) ಪ್ರಮುಖ ದ್ರಾವಿಡ ಭಾಷೆಗಳು–೨೫

೧. ಕನ್ನಡ, ೨. ತೆಲುಗು, ೩. ತಮಿಳು, ೪. ಮಲೆಯಾಳಂ, ೫. ತುಳು, ೬. ಕೊಡವ, ೭. ತೊದ, ೮. ಕೋತ, ೯. ಇರುಳ, ೧೦. ಕೊರಗ, ೧೧. ಗೋಂದಿ, ೧೨. ಕೊಂಡ, ೧೩. ಕುಇ, ೧೪. ಕುವಿ, ೧೫. ಕುಬಿ, ೧೬. ಪೆಂಗೊ, ೧೭. ಮಂಡ, ೧೮. ಇಂದಿ, ೧೯. ಕೊಲಾಮಿ, ೨೦. ನಾಯ್ಕಿ, ೨೧. ಪರ್ಜಿ, ೨೨. ಗದಬ, ೨೩. ಕುರುಖ್, ೨೪. ಮಾಲ್ತೊ, ೨೫. ಬ್ರಾಹುಈ.

## ಆ) ಕ್ಷುಲ್ಲಕ ಉಪಭಾಷೆಗಳು–೫೦

೧. ಕಸಬ, ೨. ಜೇನು ಕುಱುಂಬ, ೩. ಕಾಡ, ೪. ಬೆಳಾರಿ, ೫. ಜುರಯ್, ೬. ಮುಡುಗ, ೭. ಕೈಕಾಡಿ, ೮. ಬುರಗಂಡಿ, ೯. ಸಂಕೇತಿ, ೧೦. ಯರಕುಲ, ೧೧. ಯೆರವ, ೧೨. ಕುಱುಂಬ, ೧೩. ಕೊರವ, ೧೪. ಸೋಲಿಗ, ೧೫. ಹವ್ಯಕ, ೧೬. ಬಡಗ, ೧೭. ದೀವರ, ೧೮. ಆಲುಕುಱುಂಬ, ೧೯. ಮುಳ್ಳುಕುಱುಂಬ,

೨೦. ಪಣಿಯ, ೨೧. ಪಾಲುಕುಱುಂಬ, ೨೨. ಬೆಟ್ಟಕುಱುಂಬ (ಉರಲಿಕುಱುಂಬ) ೨೩. ಚೋಳನಾಯ್ಕ, ೨೪. ಕಾಟನಾಯ್ಕ (ತೇನ್‌ಕುಱುಂಬ), ೨೫. ಪದಿನಾಯ್ಕ ೨೬. ಕವರ, ೨೭. ಅದಿಯ, ೨೮. ಮಲಮುತ್ತ, ೨೯. ಧಂಗರ್ ಕುರುಖ್ ೩೦. ಚಂದಾನಾಯ್ಕ, ೩೧. ಬಲ್ಲಾರಿ, ೩೨. ಕೊಸಕೋರ್‌ಗದಬ, ೩೩. ದೊರ್ಲ ೩೪. ಮಡಿಯ, ೩೫. ಮರಿಯ, ೩೬. ಸಲೂರ (ಪೊಯ), ೩೭. ಪೊತ್ತಂಗಿ ೩೮. ಪರೆಂಗಿ, ೩೯. ಗೊಮ್ಮು, ೪೦. ಸವುರ, ೪೧. ಕೊಯ, ೪೨. ರಾಜಗೊಂಡಿ ೪೩. ಮಲೆನಾಡು ಇರುಳ, ೪೪. ಬೆಟ್ಟ ಕಾಡು ಇರುಳ, ೪೫. ಕೊಮ್ಮಾವು ೪೬. ದಾಸರಿ, ೪೭. ಬೇರಡಿ, ೪೮. ವಡರಿ ಇತ್ಯಾದಿ.

ಇವುಗಳಲ್ಲಿ ಕನ್ನಡ, ತೆಲುಗು, ತಮಿಳು ಮತ್ತು ಮಲೆಯಾಳಂ – ಈ ನಾಲ್ಕೇ ಗ್ರಂಥಸ್ಥ ಭಾಷೆಗಳು. ಉಳಿದೆಲ್ಲವೂ ನಿಗ್ರಾಂಥಿಕ ಭಾಷೆಗಳು. ಆದರೆ ನಿತ್ಯ ಚಲಾವಣೆಯಲ್ಲಿರುವ ಜೀವಂತ ಭಾಷೆಗಳು.

2.1.3. ಆಸೇತು ಹಿಮಾಚಲದ ಪರಿಯಂತ ಜೀವಂತವಿರುವ ಈ ಭಾಷೆಗಳನ್ನು ಅಧ್ಯಯನದ ಅನುಕೂಲಕ್ಕಾಗಿ (i) ಉತ್ತರ ದ್ರಾವಿಡ, (ii) ಮಧ್ಯ ದ್ರಾವಿಡ ಮತ್ತು (iii) ದಕ್ಷಿಣ ದ್ರಾವಿಡ – ಎಂದು ಮೂರು ಗುಂಪುಗಳಾಗಿ ವಿಭಜಿಸಿದ್ದಾರೆ.

i) ಬ್ರಾಹುಈ, ಮಾಲ್ತೊ ಮತ್ತು ಕುರುಖ್ – ಇವು ಉತ್ತರ ದ್ರಾವಿಡ ಗುಂಪಿಗೆ ಸೇರಿದ ಭಾಷೆಗಳು. ಬಲೂಚಿಸ್ತಾನದ ಸರವಾನ್ ಮತ್ತು ಝಲವಾನ್ ಪ್ರದೇಶಗಳಲ್ಲಿ ಮತ್ತು ಸಿಂಧ್ ಪ್ರದೇಶದ ಕೆಲವು ಭಾಗಗಳಲ್ಲಿ ಬ್ರಾಹುಈ ಅನ್ನು ಆಡುವ ಜನರಿದ್ದಾರೆ. ಭಾರತ ಇಬ್ಭಾಗವಾದ ಮೇಲೆ ಇವರ ನೆಲೆಗಳು ಪಾಕಿಸ್ತಾನಕ್ಕೆ ಸೇರಿಹೋದವು. ಇಂದು ಪಾಕಿಸ್ತಾನದ ಕಲತ್, ಹರಿಪುರ, ಹೈದರಾಬಾದ್ ಜಿಲ್ಲೆಗಳಲ್ಲಿ, ದಕ್ಷಿಣ ಆಫ್ಘಾನಿಸ್ಥಾನದ ಪ್ರದೇಶದಲ್ಲಿ ಜೀವಂತ ಇದೆ. ಇವನ್ನಾಡುವ ಜನರ ಸಂಖ್ಯೆ ಎರಡೂವರೆ ಲಕ್ಷ. ಈ ಬ್ರಾಹುಈ ಭಾಷೆಯನ್ನು ಕುರಿತಂತೆ ಡೆನಿಸ್ ಬ್ರೇವ್ ಎಂಬುವನು ೧೯೦೯ ರಲ್ಲಿ ಅಧ್ಯಯನ ನಡೆಸಿ, ಅದಕ್ಕೆ ಸಂಬಂಧಿಸಿದ ಒಂದು ವ್ಯಾಕರಣ ಗ್ರಂಥವನ್ನು ಬರೆದಿದ್ದಾನೆ. ಕುರುಖ್ ಭಾಷೆಯನ್ನು ಬಿಹಾರದ ಭಾಗಲ್‌ಪುರ, ಛೋಟಾ ನಾಗಪುರ, ಒರಿಸ್ಸಾದ ಸುಂದರ್‌ಗಡ್, ಮಧ್ಯಪ್ರದೇಶದ ರಾಯ್‌ಗಡ್ ಜಿಲ್ಲೆಗಳಲ್ಲಿ ಆಡುತ್ತಾರೆ. ೧೯೦೯ ರಲ್ಲಿ ಎಫ್. ಹನ್ ಎಂಬಾತನೂ, ೧೯೨೪ ರಲ್ಲಿ ಎ. ಗ್ರಿಗ್‌ನಾರ್ಡ್ ಎಂಬಾತನೂ ಈ ಭಾಷೆಯನ್ನು ಕುರಿತ ವ್ಯಾಕರಣ ಗ್ರಂಥಗಳನ್ನು ರಚಿಸಿದ್ದಾರೆ. ಮಾಲ್ತೊ ಆಡುವವರು ಮಲೆಯರ್ ಜಂಬ ಜನಾಂಗ. ಈ ಭಾಷೆಯನ್ನು ರಾಜ ಮಹಾಲಿ ಎಂದೂ ಕರೆಯುತ್ತಾರೆ. ಇದು ಬಿಹಾರದ ಸಂತಾಲ್

ಮತ್ತು ರಾಜಮಹಾಲಿ ಪರ್ವತ ಪ್ರದೇಶಗಳಲ್ಲಿ ಜೀವಂತವಿದೆ. ಅರ್ನೆಸ್ಟ್‌ದ್ರೋಸಿ ಎಂಬವನು ಇದನ್ನು ಕುರಿತು ಒಂದು ವ್ಯಾಕರಣಗ್ರಂಥ ಬರೆದಿದ್ದಾನೆ.

ii) ಉತ್ತರ ದ್ರಾವಿಡ ಅತಿ ಚಿಕ್ಕ ದ್ರಾವಿಡ ಭಾಷಾ ಗುಂಪಾದರೆ, ಮಧ್ಯ ದ್ರಾವಿಡ ಅತಿ ದೊಡ್ಡ ಗುಂಪು. ಇದರಲ್ಲಿ ತೆಲುಗು, ಕೊಲಾಮಿ, ನಾಯಕಿ, ಪೆಂಗೊ, ಮಂಡ, ಒಲ್ಲಾರಿ, ಗದಬ, ಪರ್ಜಿ, ಗೋಂದಿ, ಕೋಯೆ, ಕೊಂಡ, ಕುವಿ, ಕುಇ ಎಂಬ ಹದಿಮೂರು ಪ್ರಮುಖ ಭಾಷೆಗಳೂ ಅವುಗಳ ಉಪಭಾಷೆಗಳೂ ಸೇರುತ್ತವೆ. ತೆಲುಗನ್ನುಳಿದು ಮಿಕ್ಕವಕ್ಕೆ ಲಿಪಿ ಇಲ್ಲ. ಸಾಹಿತ್ಯ ಸಂಪದ ಗ್ರಾಂಥಿಕವಾಗಿ ಅವಕ್ಕಿಲ್ಲ. ಈ ಭಾಷಾ ವರ್ಗವು ಈಗಿನ ಆಂಧ್ರದ ಆದಿಲಾಬಾದ್, ಓರಂಗಲ್, ವಿಶಾಖಪಟ್ಟಣ, ಶ್ರೀಕಾಕುಲಂ, ಕರೀಂ ನಗರ ಮೊದಲಾದ ಜಿಲ್ಲೆಗಳಲ್ಲಿ, ಮಹಾರಾಷ್ಟ್ರದ ಚಂದವಾಡ, ರಾಯಘಡ, ವಾರ್ಧಾ, ಮಧ್ಯಪ್ರದೇಶದ ಎಟವಮಾಲ್, ಬಸ್ತರ್, ಉತ್ತರ ಪ್ರದೇಶದ ಜಗಿದಾಲ್‌ಪುರ ಮೊದಲಾದ ಜಿಲ್ಲೆಗಳಲ್ಲಿ ಒರಿಸ್ಸಾದ ಸುಂದರ್‌ಘಡ್, ಗಂಜಾಂ, ಕಲಹಂದಿ, ಕೊರಾಪುಟ್ ಜಿಲ್ಲೆಗಳಲ್ಲಿ ಪ್ರಚಲಿತವಿವೆ. ಭ. ಕೃಷ್ಣಮೂರ್ತಿ, ಎಮಿನೊ-ಬರೋ ಮೊದಲಾದ ವಿದ್ವಾಂಸರು ಇವುಗಳ ಅಧ್ಯಯನ ಮಾಡಿದ್ದಾರೆ.

iii) ದಕ್ಷಿಣ ದ್ರಾವಿಡ ಗುಂಪಿಗೆ ಕನ್ನಡ, ತಮಿಳು, ಮಲೆಯಾಳಂ, ತುಳು, ಕೊಡಗು, ತೊದ, ಕೋತ, ಇರುಳ, ಕೊರಗ ಮುಂತಾದ ಒಂಬತ್ತು ಪ್ರಮುಖ ಭಾಷೆಗಳೂ, ಅವುಗಳಿಗೆ ಸಂಬಂಧಿಸಿದ ಉಪಭಾಷೆಗಳೂ ಸೇರುತ್ತವೆ. ಕನ್ನಡ, ತಮಿಳು, ಮಲೆಯಾಳಂಗಳನ್ನು ಕರ್ನಾಟಕ, ತಮಿಳುನಾಡು, ಕೇರಳ ರಾಜ್ಯಗಳಲ್ಲಿ ಆಡುತ್ತಾರೆ. ತೊದ, ಕೋತ, ಬಡಗ, ಇರುಳ, ಕೊರಗ ಭಾಷೆಗಳನ್ನು ನೀಲಗಿರಿಯ ಆದಿವಾಸಿಗಳಾಡುತ್ತಾರೆ. ತುಳು ದಕ್ಷಿಣ ಕನ್ನಡ ಜಿಲ್ಲೆಯದು. ಕೊಡಗು ಕೊಡಗಿನ ಕೊಡವರದು. ಕನ್ನಡ, ತಮಿಳು, ಮಲೆಯಾಳಂಗಳಲ್ಲಿ ಪ್ರಾಚೀನ ಕಾಲದಿಂದಲೂ ರಚಿತವಾದ ಅನೇಕ ವ್ಯಾಕರಣ ಗ್ರಂಥಗಳಿವೆ. ಉಳಿದ ಭಾಷೆಗಳಿಗೆ ಬ್ರಿಗೇಲ್, ಎಮಿನೊ, ಶಂಕರಭಟ್ಟ ಮೊದಲಾದ ಆಧುನಿಕ ಭಾಷಾ ವಿಜ್ಞಾನಿಗಳು ವ್ಯಾಕರಣ ಗ್ರಂಥಗಳನ್ನು ಬರೆದಿದ್ದಾರೆ.

# ೩. ದ್ರಾವಿಡಭಾಷಾ ವೈಶಿಷ್ಟ್ಯಗಳು

2.3.0. ಭರತ ಖಂಡದ ಬಹುದೊಡ್ಡ ಭಾಷಾ ಪರಿವಾರವೆನಿಸಿದ ದ್ರಾವಿಡ ತನ್ನದೇ ಆದ ಹಲವು ವೈಲಕ್ಷಣ್ಯಗಳನ್ನು ಪಡೆದಿದೆ. ವಿವೇಚನೆ ತನ್ನಲ್ಲಿಯೇ ಅಂದರೆ ತನ್ನ ಸೋದರ ಭಾಷೆಗಳೊಡನೆ ನಡೆದಾಗ ಅವು ಸಾಮಾನ್ಯ ಲಕ್ಷಣಗಳೆನಿಸಿದರೆ, ಇಂಡೋ-ಯುರೋಪಿಯನ್ ಮೊದಲಾದ ಅನ್ಯಭಾಷಾ ಪರಿವಾರಗಳೊಡನೆ ಹೋಲಿಸಿ ನೋಡಿದಾಗ ಅವು ಅಸಾಮಾನ್ಯ ಹಾಗೂ ವಿಶಿಷ್ಟ ಗುಣಗಳಾಗಿ ಗೋಚರಿಸುತ್ತವೆ. ಈ ವಿಶ್ಲೇಷಣೆಯ ಸಂದರ್ಭದಲ್ಲಿ ಧ್ವನಿಮಾ (Phoneme) ಆಕೃತಿಮಾ (Morpheme) ಮತ್ತು ವಾಕ್ಯರಚನಾ ವಿನ್ಯಾಸ ಅಥವಾ ಶಿಲ್ಪ (Composition and stucture) ಇವುಗಳನ್ನು ಆಧರಿಸುವುದು ಸಾಧಾರಣ.

ಧ್ವನಿಮಾ ಅಂದರೆ ನಾವು ಉಚ್ಚರಿಸುವ ಧ್ವನಿಯ ಶಬ್ದರೂಪ. ಉದಾಹರಣೆಗೆ: ಕನ್ನಡಿಗರು ಅ, ಬ, ಕ, ಟ, ಡ, ವ, ಯ, ಳ ಇತ್ಯಾದಿಗಳನ್ನು ಧ್ವನಿಗೈದಂತೆ, ಇಂಗ್ಲಿಷರು ಎಫ್, ಜಡ್ ಇತ್ಯಾದಿಗಳನ್ನೂ, ಅರೇಬಿಯನ್ನರು ಪರ್ಷಿಯನ್ನರು ಮೊದಲಾದವರು ಜೀಮ್, ಹ್ಗ್ರೈ ಇತ್ಯಾದಿಗಳನ್ನು ಶಬ್ದಿಸುತ್ತಾರೆ. ಭಾಷಾ ರಚನೆಯ ಸಂದರ್ಭದಲ್ಲಿ ಈ ಧ್ವನಿಗಳು ಸಕ್ರಿಯ ಪಾತ್ರ ವಹಿಸುವುದರಿಂದ ತಾವು ನಿರ್ದಿಷ್ಟ ಬೆಲೆ ಪಡೆದುಕೊಳ್ಳುತ್ತವೆ. ಇಂತಹ ಬಾಯಿಂದ ಬರುವ ಕೇವಲ ಶಬ್ದಸ್ವರೂಪಗಳನ್ನು 'ಧ್ವನಿಮಾ' ಎಂದು ಕರೆಯುತ್ತಾರೆ.

ಧ್ವನಿಯಿಂದಾದ ಧ್ವನಿಮಾಗಳು ಎರಡು ಅಥವಾ ಹೆಚ್ಚು ಸೇರಿ ಒಂದು ಆಕೃತಿಮಾ ಆಗುತ್ತದೆ. ಉದಾಹರಣೆಗೆ: 'ಮ' ಒಂದು ಧ್ವನಿಮಾ 'ರ' ಇನ್ನೊಂದು ಧ್ವನಿಮಾ ಎರಡೂ ಕೂಡಿದಾಗ 'ಮರ' ಎಂಬ ಆಕೃತಿಮಾ ಆಗುತ್ತದೆ.

ಹೀಗೆ ಕ್ರಮಬದ್ಧವಾಗಿ ಕೂಡಿ, ಅರ್ಥ ಕೊಡುವ ಧ್ವನಿಮಾಗಳ ಮೊತ್ತವೆ ಆಕೃತಿಮಾ. ಅದು ಅರ್ಥಯುಕ್ತ ಕನಿಷ್ಠತಮ ಘಟಕವೂ ಹೌದು (A Morpheme is the smallest meaningful unit).

ಆಕೃತಿಮಾಗಳಲ್ಲಿ ಮುಕ್ತ (free) ಮತ್ತು ಬದ್ಧ (Bound) ಎಂದು ಎರಡು ಬಗೆಯುಂಟು. 'ಮರ' ಮುಕ್ತ ಆಕೃತಿಮಾ. ಅನ್ನು, ಇಂದ, ಕೆ, ಇತ್ಯಾದಿ ವಿಭಕ್ತಿ ಪ್ರತ್ಯಯಗಳು ಬದ್ಧ ಆಕೃತಿಮಾಗಳು. ಬದ್ಧ ಆಕೃತಿಮಾಗಳಿಗೆ ಸ್ವತಂತ್ರ ಅಸ್ತಿತ್ವ ಇಲ್ಲ. ಅವು ಮುಕ್ತ ಆಕೃತಿಮಾಗಳೊಡನೆ ಸೇರಿ ವ್ಯವಹರಿಸುತ್ತವೆ. ಆಗ ಮರ+ಅನ್ನು = ಮರವನ್ನು ಮೊದಲಾದ ರೂಪಪರಿವರ್ತಿತ ಶಬ್ದಗಳು ಸಿದ್ಧವಾಗುತ್ತವೆ. ಇಂತಹ ಮುಕ್ತ ಮತ್ತು ಬದ್ಧ ಆಕೃತಿಮಾಗಳು ಕೇಶಿರಾಜ ಹೇಳುವಂತೆ 'ನಾಮರೂಢಿ ಅಳಿಯದೆ ಇದ್ದಲ್ಲಿ' ಅಂದರೆ ಭಾಷಾ ಮರ್ಯಾದೆಗನುಗುಣವಾಗಿ ಬಳಕೆಗೊಂಡಾಗ, ಅವು ಅರ್ಥಕೊಡುವ ವಾಕ್ಯಗಳಾಗುತ್ತವೆ.

ಈ ಬಗೆಯ ಧ್ವನಿಮಾ, ಆಕೃತಿಮಾ ಮತ್ತು ವಾಕ್ಯವಿನ್ಯಾಸಗಳ ಆಧಾರದ ಮೇಲೆ ದ್ರಾವಿಡಭಾಷಾ ಪರಿವಾರದ ವೈಶಿಷ್ಟ್ಯಗಳನ್ನು ಗುರುತಿಸಬಹುದು.

### 2.3.1. (ಅ) ದ್ರಾವಿಡ ಧ್ವನಿಮಾಗಳು :

೧. ದ್ರಾವಿಡ ಸ್ವರಗಳಲ್ಲಿ : ಅ ಇ ಉ ಎ ಒ—ಎಂಬ ಹ್ರಸ್ವ ಸ್ವರಗಳೂ, ಆ ಈ ಊ ಏ ಓ—ಎಂಬ ದೀರ್ಘಸ್ವರಗಳೂ ಇವೆ. ಆದರೆ ಸಂಸ್ಕೃತದಲ್ಲಿ ಹ್ರಸ್ವ ಎ ಹ್ರಸ್ವ ಒ ಇಲ್ಲ. ದೀರ್ಘ 'ಏ ಓ'ಗಳು ಮಾತ್ರ ಇವೆ. ಋ ೠ. ಌ ೡ ಸ್ವರಗಳಾಗಲಿ ಐ ಮತ್ತು ಔ ಎಂಬ ಸಂಧ್ಯಕ್ಷರಗಳಾಗಲಿ ದ್ರಾವಿಡದಲ್ಲಿಲ್ಲ. ಸಂಸ್ಕೃತದಲ್ಲಿವೆ.

೨. ದ್ರಾವಿಡ ವರ್ಗೀಯ ವ್ಯಂಜನಗಳಲ್ಲಿ : ದ್ರಾವಿಡ ವರ್ಗೀಯ ವ್ಯಂಜನಗಳಲ್ಲಿ ಮಹಾಪ್ರಾಣ ಧ್ವನಿಮಾಗಳಿಲ್ಲ. ಅಂತೆಯೇ ಘೋಷಧ್ವನಿಮಾಗಳಾದ 'ಗ ಜ ಡ ದ ಬ'ಗಳು ಮೂಲ ದ್ರಾವಿಡದಲ್ಲಿಲ್ಲ. ಆದರೆ ಕಾಲಾನಂತರದಲ್ಲಿ ತಮಿಳು, ಮಲೆಯಾಳಂ ಹೊರತು ಉಳಿದ ದ್ರಾವಿಡ ಭಾಷೆಗಳು ಘೋಷ ಧ್ವನಿಮಾಗಳನ್ನು ಆದಿಯಾಗುಳ್ಳ ಪದಗಳನ್ನು ನಿರ್ಮಿಸಿಕೊಂಡಿವೆ.

೩. ದ್ರಾವಿಡ ಅವರ್ಗೀಯ ವ್ಯಂಜನಗಳಲ್ಲಿ : ಶ, ಷ, ಗಳಿಲ್ಲ, ದ್ರಾವಿಡದ ಱ, ೞ. (ಕು)ಳ ಧ್ವನಿಮಾಗಳು ಸಂಸ್ಕೃತ ದಲ್ಲಿಲ್ಲ. ಅದೇ ರೀತಿ ಪರುಷ ಧ್ವನಿಮಾ ಆದ 'ಹ' ದ್ರಾವಿಡದಲ್ಲಿಲ್ಲ, ಸಂಸ್ಕೃತದಲ್ಲಿದೆ.

೪. ದ್ರಾವಿಡದಲ್ಲಿ : ಇ/ಎ, ಉ/ಒ ಆಗಿ ಪರಿವರ್ತನ ಗೊಳ್ಳುತ್ತವೆ.

ಉದಾ : ಇಲೈ> ಎಲೈ, ಎಲೆ.
ತುಗಲ್> ತೊಗಲ್, ತೊಗಲು.

೫. ತಾಲವ್ಯೀಕರಣ : ದ್ರಾವಿಡದಲ್ಲಿ ಕ> ಚ ಆಗಿ ಪ್ರಯೋಗ ಗೊಳ್ಳುತ್ತದೆ. ಇದನ್ನು 'ತಾಲವ್ಯೀಕರಣ' ಎನ್ನುತ್ತಾರೆ.

ಉದಾ : ಕೆಸರು> ಚೆಯರು.
ಕೆಂಗಣಗಿಲೆ ಚೆಂಗಣಗಿಲೆ.
ಕೆನ್ನಕೇಸರಿ> ಚೆನ್ನಕೇಸರಿ.
ಕೆಂದೆಂಗು> ಚೆಂದೆಂಗು.
ಕೆಂದುಟಿ> ಚೆಂದುಟಿ ಇತ್ಯಾದಿ.

೬. ಚ> ಸ ಕಾರ ಪರಿವರ್ತನೆ : ಚ> ಸಕಾರವಾಗಿ ಪರಿವರ್ತನೆ ಗೊಳ್ಳುತ್ತದೆ, ದ್ರಾವಿಡದಲ್ಲಿ.

ಉದಾ : ಚೆಯರು> ಸೇರು.
ಚಾಪೆ> ಸಾಪೆ.
ಚೋರು> ಸೋರು.
ಚೌಟು> ಸೌಟು ಇತ್ಯಾದಿ.

೭. ಅನುನಾಸಿಕಗಳಲ್ಲಿ : 'ಙ್' ಧ್ವನಿವಾ ದ್ರಾವಿಡವಲ್ಲಿ ಪದದ ಆದಿಯಲ್ಲಿ ಬರುವುದಿಲ್ಲ. ಅಂದರೆ 'ಣ' ಕಾರ ಆದಿಯಾಗುಳ್ಳ ಯಾವ ಪದವೂ ದ್ರಾವಿಡದಲ್ಲಿಲ್ಲ.

೮. ಯೋಗವಾಹಗಳು : ಬಿಂದು (ಅನುಸ್ವಾರ), ವಿಸರ್ಗ (ವಿಸರ್ಜನೀಯ), ಜಿಹ್ವಾಮೂಲೀಯ, ಉಪಾಧ್ಮಾನೀಯ ಎಂಬ ಸಂಸ್ಕೃತದಲ್ಲಿರುವ ಯೋಗವಾಹಗಳು ದ್ರಾವಿಡ ದಲ್ಲಿಲ್ಲ.

೯. ದ್ರಾವಿಡದಲ್ಲಿ ನಡುವಣ ಸ್ವರ ಅದೃಢ :

ಉದಾಹರಣೆ : ಹುಡುಗಿ. ಹುಡಗಿ. ಹುಡಿಗಿ.
ಇಲ್ಲಿ 'ಡು ಡ ಡಿ' ಮೂರೂ ರೂಪಗಳ ಪ್ರಯೋಗ ಇವೆ. ಇವಕ್ಕೆ ಕಾರಣ ಅವು ಪದಮಧ್ಯದಲ್ಲಿ ಬಂದಿರುವುದು. ಈ

ರೀತಿ ಬಂದಾಗ ನಡುವಣಸ್ವರ ದೃಢವಾದ ಏಕರೂಪದಲ್ಲಿರುವುದಿಲ್ಲ. ಇದು ದ್ರಾವಿಡ ಭಾಷಾ ವೈಶಿಷ್ಟ್ಯ.

೧೦. ದ್ರಾವಿಡಭಾಷೆಗಳಲ್ಲಿ ಪದದ ಆದಿವರ್ಣ ವ್ಯಂಜನದ್ವಿತ್ವವಾಗಿಯಾಗಲಿ ಅಥವಾ ಘೋಷಧ್ವನಿಮಾ ಆಗಿ ಆಗಲಿ ಇರುವುದಿಲ್ಲ. ಉದಾಹರಣೆ: ದ್ರಾವಿಡ.

'ದ್ರಾ' ಎಂಬ ದ್ವಿತ್ವದಿಂದ ಕೂಡಿದ ಅದರಲ್ಲೂ ರೇಫೆವೆರಸಿದ ವಿಜಾತೀಯ ದ್ವಿತ್ವವನ್ನೊಳಗೊಂಡ ಆದಿವರ್ಣದ ಪದ ದ್ರಾವಿಡದಲ್ಲಿಲ್ಲ.

ಅದೇ ರೀತಿ 'ಗ ಜ ಡ ದ ಬ' ಎಂಬ ಘೋಷ ಧ್ವನಿಮಾಗಳನ್ನು ಆದಿಯಲ್ಲಿ ಪಡೆದ ಪದಗಳಿಲ್ಲ ದ್ರಾವಿಡದಲ್ಲಿ. ಆದರೆ ತೆಲುಗು ಮೊದಲಾದ ಕೆಲವು ಭಾಷೆಗಳಲ್ಲಿ ಇವೆ. ಅವು ವರ್ಣಪಲ್ಲಟದಿಂದಾದವುಗಳು. ಉದಾಹರಣೆ: ಅಡಗು> ದಾಗು

ಅಡ್ + ಅಗ್ + ಉ> ಡ್ + ಅ + ಅಗ್ + ಉ>
ಡ್ + ಆಗ್ + ಉ = ಡಾಗು> ದಾಗು ಎಂದಾಗಿದೆ.

## 2.3.2. (ಆ) ಆಕೃತಿಮಾ :

### 2.3.2.1 ೧. ಲಿಂಗ :

ಪ್ರಪಂಚದ ಭಾಷೆಗಳನ್ನು ಗಣನೆಗೆ ತೆಗೆದುಕೊಂಡಾಗ ಲಿಂಗವ್ಯವಸ್ಥೆ ತುಂಬಾ ವಿಚಿತ್ರ ಮತ್ತು ವಿಭಿನ್ನ ಆಗಿರುವುದು ಕಂಡುಬರುತ್ತದೆ. ಲಿಂಗ ವಿಂಗಡಣೆಗೆ ಒಂದೊಂದು ಭಾಷೆಯಲ್ಲಿ ಒಂದೊಂದು ನಿಯಮ ಇದೆ. ವಸ್ತು ಸಜೀವವೊ ಅಜೀವವೊ ಎಂಬ ಪರಿಗಣನೆಯ ಮೇಲೆ ಲಿಂಗ ನಿರ್ಣಯ ಕೆಲವು ಭಾಷೆಗಳದು ; ಹೆಣ್ಣು ಮತ್ತು ಗಂಡು ಎಂಬ ದೈಹಿಕ ಲಿಂಗ ಭೇದದಿಂದ ಲಿಂಗ ನಿರ್ಣಯ ಮತ್ತು ಕೆಲವರದು ; ವಿವೇಚನಾಶೀಲ ಉಳ್ಳದ್ದೇ (ಸ್ವಂತ ಬುದ್ಧಿ ಅಥವಾ ಸ್ವೋಪಜ್ಞತೆ ಇರುವಂಥದೇ) ಅಥವಾ ಅನ್ಯಾಶ್ರಯಾಪೇಕ್ಷಿ ಬುದ್ಧಿ ಉಳ್ಳದ್ದೇ (ಸ್ವಂತ ಬುದ್ಧಿ ಇಲ್ಲದ್ದೇ) ಎಂಬ ಆಧಾರ ಇನ್ನು ಕೆಲವರದು ; ಕೇವಲ ಶಬ್ದಾನುಸಾರಿ ಮತ್ತು ಸಂದರ್ಭಾನುಸಾರಿ ಲಿಂಗ ನಿರ್ಣಯ ಇನ್ನೂ ಮತ್ತೆ ಕೆಲವರದು. ಹೀಗೆ ಲಿಂಗ ನಿರ್ಣಯ ಸೂತ್ರಗಳು ಹಲವು ಬಗೆಯವು. ಹಿಂದಿ, ಫ್ರೆಂಚ್, ಇಟ್ಯಾಲಿಯನ್, ಸ್ಪ್ಯಾನಿಷ್ ಭಾಷೆಗಳಲ್ಲಿ ಎರಡು, ಗ್ರೀಕ್, ಜರ್ಮನ್, ಇಂಗ್ಲಿಷ್ ಭಾಷೆಗಳಲ್ಲಿ ಮೂರು, ಬರಷಸ್ಕಿಯಲ್ಲಿ ನಾಲ್ಕು, ಸಂಸ್ಕೃತದಲ್ಲಿ ಒಂಬತ್ತು, ಬಂಟುವಿನಲ್ಲಿ ಇಪ್ಪತ್ತನಾಲ್ಕು ಬಗೆಯ ಲಿಂಗಗಳಿವೆ ! ಹೀಗೆ

ಲಿಂಗವಿವಕ್ಷೆಯು ಸೂತ್ರ ಹಾಗೂ ಸಂಖ್ಯೆ ಎರಡೂ ದೃಷ್ಟಿಗಳಿಂದಲೂ ವಿಭಿನ್ನ ಛಾಯೆ ಉಳ್ಳುದಾಗಿದೆ.

ದ್ರಾವಿಡದಲ್ಲಿ ಲಿಂಗ ವ್ಯವಸ್ಥೆ ತುಂಬಾ ವೈಜ್ಞಾನಿಕ ಮತ್ತು ಅರ್ಥಾನುಸಾರಿ; ಸಂಸ್ಕೃತಾದಿಗಳಲ್ಲಿ ಅವೈಜ್ಞಾನಿಕ ಮತ್ತು ಶಬ್ದಾನುಸಾರಿ, ದ್ರಾವಿಡದಲ್ಲಿ ಲಿಂಗವಿವಕ್ಷೆ ಗೈಯುವಾಗ ಮೊದಲು ಹೆಣ್ಣು, ಗಂಡು ಎಂದಾಗಲಿ ಅಥವಾ ಸಜೀವವೆ, ನಿರ್ಜೀವವೆ ಎಂದಾಗಲಿ ನೋಡುವುದಿಲ್ಲ. ವಸ್ತುವನ್ನು, ಅದು ಸ್ವಂತ ಬುದ್ಧಿ ಉಳ್ಳದ್ದೇ ಅಥವಾ ಅಲ್ಲವೆ ಎಂಬುದನ್ನಷ್ಟೇ ಪರಿಗಣಿಸುತ್ತದೆ. ಈ ಬಗೆಯು ಸ್ವಂತಿಕೆಯುದನ್ನು ತಮಿಳಿನಲ್ಲಿ ಉಯರ್‌ತಿಣೈ(ಮೇಲುವರ್ಗ)ಎಂತಲೂ, ಸ್ವಂತಿಕೆ ಇಲ್ಲದ್ದನ್ನು ಅಫ್ಹಿಣೈ (ಕೀಳುವರ್ಗ) ಎಂತಲೂ, ತೆಲುಗಿನಲ್ಲಿ ಮಹತ್ ಮತ್ತು ಅಮಹತ್ ಎಂತಲೂ ಕರೆಯುತ್ತಾರೆ. ಅನಂತರ ಮಹತ್‌ನಲ್ಲಿ ಹೆಣ್ಣೆ ಅಥವಾ ಗಂಡೆ ಎಂದು ಗುರುತಿಸುವುದು, ಹೆಣ್ಣಾದರೆ ಸ್ತ್ರೀಲಿಂಗ, ಗಂಡಾದರೆ ಪುಲ್ಲಿಂಗ, ಅಮಹತ್‌ಗಳೆಲ್ಲಾ ನಪುಂಸಕಲಿಂಗದ ವರ್ಗಕ್ಕೆ ಸೇರುತ್ತವೆ.

ನಕ್ಷೆ ನೋಡಿ :




ವಿಶೇಷ ವಿಚಾರ : ಅಮಹತ್ ವರ್ಗಕ್ಕೆ ಪಶುಪಕ್ಷಿ ಪ್ರಾಣಿಗಳಷ್ಟೇ ಅಲ್ಲದೆ ಹೆಣ್ಣು, ಗಂಡು ಭೇದವಿಲ್ಲದೆ ಮನುಷ್ಯರೂ ಸೇರುತ್ತಾರೆ.

ಉದಾಹರಣೆಗಳು :

ಅಜ್ಜಿ ಬಂತು.
ಅಜ್ಜ ಹೋಯ್ತು.
ಮಗು ಆಡುತ್ತೆ.
ದೇವರು ಕುಣಿಯುತ್ತೆ.

ಗಂಡು, ಹೆಣ್ಣು, ಹಸೆಮಣೆ ಮೇಲೆ ಕೂತಿವೆ.
ಪಕ್ಕದ ಮನೆಗೆ ಇವೊತ್ತು ಗಂಡು ಬರುತ್ತಂತೆ. ಇತ್ಯಾದಿ.

ಇಲ್ಲಿನ ಉದಾಹರಣೆಗಳಲ್ಲಿ ಕರ್ತೃಗಳು ಗಂಡು ಹೆಣ್ಣು ಆಗಿದ್ದರೂ ಕ್ರಿಯಾಪದಗಳು ನಪುಂಸಕ ಪ್ರತ್ಯಯವುಳ್ಳವಾಗಿರುವುದಕ್ಕೆ ಕಾರಣ ಅವು ಆ ಕ್ಷಣದಲ್ಲಿಯಾದರೂ ತಮ್ಮ ಸ್ವಂತಿಕೆ ಅಥವಾ ಸ್ವಂತ ಬುದ್ಧಿಯನ್ನು ಬಿಟ್ಟುಕೊಟ್ಟವುಗಳು. ಅಜ್ಜ ಅಜ್ಜಿ ಅರವತ್ತಾದ ಮೇಲೆ ತಮ್ಮ ಬುದ್ಧಿಯನ್ನು ಮಗ ಅಥವಾ ಸೊಸೆ ಅಥವಾ ಮೊಮ್ಮಕ್ಕಳ ಕೈಗೆ ಕೊಟ್ಟು ಅವರು ಹೇಳಿದಂತೆ ಕೇಳುವ ಪ್ರಾಣಿಗಳು. ಮಗುವಿಗೆ ಬುದ್ಧಿಯೇ ಬಲಿತಿರುವುದಿಲ್ಲ. ಹಸೆಮಣೆ ಮೇಲಿರುವ ಹೆಣ್ಣು ಗಂಡುಗಳು ಪುರೋಹಿತರ ಅಥವಾ ಮುತ್ತೈದೆಯರ ಕೈಬೊಂಬೆಗಳು. ಅವರು ಹೇಳಿದಂತೆ ಕೇಳುವ ಕೋಲೆ ಬಸವಗಳು. ದೇವರಿಗಂತೂ ಸ್ವಂತ ಚಲನೆಯೂ ಇಲ್ಲ, ಸ್ವಂತ ಬುದ್ಧಿ ಮೊದಲೇ ಇಲ್ಲ. ಆದ್ದರಿಂದ ಇವೆಲ್ಲ ಒಂದು ವರ್ಗಕ್ಕೆ ಸೇರಿ ನಪುಂಸಕಗಳೆನಿಸುತ್ತವೆ ದ್ರಾವಿಡದಲ್ಲಿ. ವಿಚಿತ್ರವೆಂದರೆ ತೆಲುಗಿನಲ್ಲಿ ಹೆಣ್ಣು ಕರ್ತೃವಾಗಿದ್ದಾಗ ಸ್ತ್ರೀಲಿಂಗಕ್ಕೆ ಬದಲು ನಪುಂಸಕಲಿಂಗವೇ ಬಳಕೆಯಾಗುತ್ತದೆ.

ಉದಾಹರಣೆಗೆ : ಪೆಂಡ್ಲಾಮು ವಚ್ಚಿಂದಿ. (ಹೆಂಡತಿ ಬಂತು).

ಇದಕ್ಕೆ ಕಾರಣ, ಅನಾದಿ ಕಾಲದಿಂದಲೂ ಶೋಷಣೆಗೆ ಒಳಗಾದ, ಸದಾ ಪತಿ, ಪುತ್ರರ ಸೇವೆಯಲ್ಲಿ ನಿರತಳಾಗಿ ತನ್ನ ಸ್ವಂತಿಕೆಯನ್ನು ನೀಗಿಕೊಂಡ ವಸ್ತುವಾದ್ದರಿಂದ ಹೆಂಡತಿ ತೆಲುಗಿನಲ್ಲಿ ನಪುಂಸಕಲಿಂಗವಾದಳು.

ಸಂಸ್ಕೃತದಲ್ಲಿ ಲಿಂಗವಿವಕ್ಷೆ ಕೆಲವೆಡೆ ಶಬ್ದಾನುಸಾರಿ,

ಉದಾಹರಣೆಗೆ : ದಾರಾ (ಹೆಂಡತಿ)—ಪುಲ್ಲಿಂಗ.
ಪತ್ನೀ (ಹೆಂಡತಿ)—ಸ್ತ್ರೀಲಿಂಗ.
ಕಳತ್ರ (ಹೆಂಡತಿ)—ನಪುಂಸಕಲಿಂಗ.

ಸಾಮಾನ್ಯವಾಗಿ 'ಹೆಂಡತಿ' ಸ್ತ್ರೀಲಿಂಗ, ಆದರೆ ಸಂಸ್ಕೃತದ ಲಿಂಗ ನಿರ್ಣಯ ಶಬ್ದಾನುಸಾರಿಯಾದ್ದರಿಂದ ಮೇಲಿನ ಮೂರೂ ಪದಗಳು ಮೂರು ಲಿಂಗಗಳಾಗುತ್ತವೆ. 'ದಾರಾ' 'ಆ' ಕಾರಾಂತ 'ಪುಲ್ಲಿಂಗ' ಶಬ್ದ. 'ಪತ್ನೀ' 'ಈ' ಕಾರಾಂತ 'ಸ್ತ್ರೀಲಿಂಗ' ಶಬ್ದ, 'ಕಳತ್ರ' ಅಕಾರಾಂತ ನಪುಂಸಕಲಿಂಗ 'ಶಬ್ದ'.

ಹಸ್ತ ಎಂಬಲ್ಲ 'ಹಸ್' ಎಂಬ ಸಕಾರ ವ್ಯಂಜನವಿರುವುದರಿಂದ 'ತ' ಎಂದು ಅಕಾರಾಂತವಾಗಿದ್ದರೂ ಅದು ಪುಲ್ಲಿಂಗ. ಅದೇ ರೀತಿ ಇಂಡೋ–ಆರ್ಯನ್ ಭಾಷಾ

ವರ್ಗಕ್ಕೆ ಸೇರಿದ ಹಿಂದಿಯಲ್ಲಿ 'ಫ್' ಅಂತ್ಯವಾಗುಳ್ಳ ಶಬ್ದಗಳು ಒಂದೆಡೆಯಲ್ಲಿ ಕರ್ತೃ ಪದವು ಪುಲ್ಲಿಂಗವಿದ್ದರೂ ಕ್ರಿಯಾಪದವು ಸ್ತ್ರೀಲಿಂಗ ಪ್ರತ್ಯಯ ಪಡೆಯುತ್ತದೆ.

ಉದಾಹರಣೆಗೆ : ರಾಮಾ ಉಸ್ಕೀ ತರಫ್ ಆಯೀ.
(ರಾಮನು ಆ ಕಡೆಯಿಂದ ಬಂದನು).

ಇಲ್ಲಿ ಕರ್ತೃಪದ 'ರಾಮ' ಎಂಬುದು ಪುಲ್ಲಿಂಗ ಶಬ್ದ. ಆ ಪುಲ್ಲಿಂಗಕ್ಕೆ ಲೆಕ್ಕಾಚಾರವಾಗಿ ಪುಲ್ಲಿಂಗ ಕ್ರಿಯಾರೂಪವಾದ 'ಆಯಾ' ಎಂದೇ ಇರಬೇಕಿತ್ತು. ಆದರೆ 'ತರಫ್' (ಕಡೆಯಿಂದ) ಎಂಬ ಪದದಲ್ಲಿ 'ಫ್' ಅಂತ್ಯ ವ್ಯಂಜನವಿರುವುದರಿಂದ 'ಫ್' ಅಂತ್ಯವುಳ್ಳ ಶಬ್ದ ಸ್ತ್ರೀಲಿಂಗವೆನಿಸಿದ್ದರಿಂದ ಕ್ರಿಯಾಪದ 'ಆಯೀ' ಎಂಬ ಸ್ತ್ರೀಲಿಂಗ ರೂಪು ಧರಿಸಿದೆ. ಇದು ಶಬ್ದಾನುಸಾರಿ ವಿವೇಚನೆಯ ಪ್ರಭಾವ.

ಸಂಸ್ಕೃತದಲ್ಲಿ ಶಬ್ದಾನುಸಾರಿ ಅಷ್ಟೇ ಅಲ್ಲ, ಲಿಂಗವಿವಕ್ಷೆ ಸಂದರ್ಭಾನುಸಾರಿ. ಉದಾಹರಣೆಗೆ : ಮಣಿ, ಮರೀಚಿ ಶಬ್ದಗಳನ್ನು ನೋಡಬಹುದು. ಇವು ಸಂದರ್ಭಾನುಸಾರ ಪುಲ್ಲಿಂಗವೂ ಆಗುತ್ತವೆ, ಸ್ತ್ರೀಲಿಂಗವೂ ಆಗುತ್ತವೆ. ಅದೇರೀತಿ ಘೃತ, ಭೂತ ಎಂಬ ಪದಗಳು ಸಂದರ್ಭಾನುಸಾರವಾಗಿ ಪುಲ್ಲಿಂಗವೂ ಆಗುತ್ತವೆ, ನಪುಂಸಕ ಲಿಂಗವೂ ಆಗುತ್ತವೆ.

ಲಿಂಗ ನಿರ್ಣಯ ಇಂತಹ ಗೋಜಲು ಗೋಜಲಾಗಿರುವುದರಿಂದಲೇ ಸಂಸ್ಕೃತಾದಿ ಭಾಷೆಗಳನ್ನು ಶುದ್ಧರೂಪದಲ್ಲಿ ಆಡುತ್ತೇವೆಂಬ ಧೈರ್ಯ ಕಲಿತವರಿಗೆ ಬರುವುದಿಲ್ಲ. ದ್ರಾವಿಡದ ಸುಭಗತೆ ಸೌಲಭ್ಯ ಅವುಗಳಿಗಿಲ್ಲ.

## 2.3.2.2. ವಚನ :

| | | |
|---|---|---|
| ರಾಮಃ | ರಾಮೌ | ರಾಮಾಃ |
| (ಒಬ್ಬ ರಾಮನು) | (ಇಬ್ಬರು ರಾಮರು) | (ಅನೇಕ ಜನ ರಾಮರು) |

ಸಂಸ್ಕೃತದಲ್ಲಿ ಈ ಮೂರೂ ಕ್ರಮವಾಗಿ ಏಕವಚನ, ದ್ವಿವಚನ ಮತ್ತು ಬಹುವಚನಗಳು. ಸಂಸ್ಕೃತದಂತೆ ಗ್ರೀಕ್ ಭಾಷೆಯಲ್ಲೂ ಮೂರು ವಚನಗಳಿವೆ. ಆದರೆ ದ್ರಾವಿಡ ಭಾಷೆಗಳಲ್ಲಿ ವಚನಗಳು ಎರಡೆ ; ಏಕ ಮತ್ತು ಅನೇಕ (ಬಹು). ದ್ವಿವಚನ ಇಲ್ಲ. ಕೇಶಿರಾಜ ಸಂಸ್ಕೃತದ ಪ್ರಭಾವದಿಂದಾಗಿ 'ದ್ವಿವಚನಮುಚಿತದೆ ಬರ್ಕುಂ' ಎಂದು ಹೇಳಿದ್ದಾನೆ. ಆದರೂ ದ್ರಾವಿಡದಲ್ಲಿ ದ್ವಿವಚನ ಇಲ್ಲವೇ ಇಲ್ಲ. ಏಕ ಮತ್ತು ಅನೇಕ. ಅಂದರೆ ಒಂದು ಮತ್ತು ಒಂದಕ್ಕಿಂತ ಹೆಚ್ಚು. ಅದು ಎರಡಾಗಬಹುದು, ಎಂಬತ್ತಾಗಬಹುದು. ಗ್ರಹಣ ಸಂದರ್ಭದಲ್ಲಿ ಅದು ಬಹುವಚನವೇ.

ಹೀಗೆ ವಚನ ವ್ಯವಸ್ಥೆಯಲ್ಲಿ ದ್ರಾವಿಡ ಸಂಸ್ಕೃತಾದಿ ಇಂಡೋ-ಆರ್ಯನ್ ಭಾಷೆಗಳಿಂದ ಭಿನ್ನ. ಆದರೆ ಇಂಗ್ಲಿಷ್, ಟರ್ಕಿ, ಹಂಗೇರಿಯನ್ ಭಾಷೆಗಳಲ್ಲೂ ವಚನಗಳು ಎರಡೇ ಇವೆ.

ದ್ರಾವಿಡದಲ್ಲಿ ಅದರಲ್ಲೂ ಕನ್ನಡದಲ್ಲಿ ಹಿರಿಯರಿಗೆ ಗೌರವ ಸೂಚಿಸುವಾಗ, ಆಗದವರ ಮೇಲೆ ವ್ಯಂಗ್ಯ ಹರಿಸುವಾಗ ಬಹುವಚನ ಪ್ರಯೋಗ ಉಂಟು.

ಉದಾಹರಣೆಗೆ: ನಮ್ಮ ತಾಯಿಯವರು.
ನಮ್ಮ ಸ್ವಾಮಿಗಳವರು.

(ಸ್ವಾಮಿ+ಗಳು+ಅವರು—ಇದು ಸಿಕ್ಕಾಬಟ್ಟೆ ಗೌರವ).

(i) ಕೆಲವರು ಗಂಡಂದಿರು ತಮ್ಮ ಹೆಂಡತಿಯ ಬಗೆಗೆ ಹೇಳುವಾಗ 'ನಮ್ಮ ಹೆಂಗಸರು ಬೇಡಾ ಅಂತ ಹೇಳಿದರು' ಎನ್ನುತ್ತಾರೆ. ಇಲ್ಲಿ 'ಹೆಂಗಸರು' ಎನ್ನುವ ಪದ ಹೆಂಡತಿಯ ಮೇಲೆ ಅವರಿಗಿರುವ ಗೌರವ ಸೂಚಕ ಅಷ್ಟೆ !

(ii) ಕೆಲವು ವೇಳೆ ಬೇರೆಯವರನ್ನು ನಿಂದಿಸುವ ಅರ್ಥದಲ್ಲಿ ಏಕವಚನಕ್ಕೆ ಬದಲು ಬಹುವಚನ ಬಳಸುತ್ತೇವೆ ;

ಉದಾಹರಣೆಗೆ: ಏನು ಮಹಾನುಭಾವರು ಈ ಕಡೆ ದಯಮಾಡಿಸಿದಿರಿ. ಇದರ ಅಂತರಾರ್ಥ 'ಏನಲೊ ಅಯೋಗ್ಯ ಈ ಕಡೆ ಏಕೆ ಬಂದೆ?' ಎಂದು, ಆದರೂ ವ್ಯಂಗ್ಯ ಹರಿಸುವೆಡೆಯಲ್ಲಿ ಬಹುವಚನ ಪ್ರಯೋಗಗೊಂಡಿದೆ.

(iii) ನಪುಂಸಕ ಲಿಂಗಗಳಲ್ಲಿ ಕೆಲವೊಮ್ಮೆ ಬಹುವಚನವಿದ್ದರೂ ಏಕವಚನವಾಗಿ ಪ್ರಯೋಗವಾಗುವುದುಂಟು.

ಉದಾಹರಣೆಗೆ: ಆನೆ ನುಗ್ಗಿದುವು.
ಕೋತಿ ತೋಟವನ್ನೆಲ್ಲಾ ಲೂಟಿ ಮಾಡಿದುವು.

ಇಲ್ಲಿ ' ' 'ಕೋತಿ' ಬಹುವಚನದ ಅರ್ಥದಲ್ಲಿ ಏಕವಚನವಾಗಿ ಪ್ರಯೋಗಗೊಂಡಿದೆ.

(iv) ಕನ್ನಡದಲ್ಲಿ ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳೆರಡಕ್ಕೂ ಬಹುವಚನ ಪ್ರತ್ಯಯಗಳು ಒಂದೇ ರೂಪದಲ್ಲಿರುವುದುಂಟು.

ಉದಾಹರಣೆಗೆ : ಅಣ್ಣಗಳು, ತಂದೆಯುವರು.
ಅಕ್ಕಗಳು, ತಾಯಿಯುವರು.

ಇಲ್ಲಿ 'ಗಳ್' ಮತ್ತು 'ಅರ್' ಅಥವಾ 'ಅವರು' ಎರಡೂ ಲಿಂಗಗಳಲ್ಲಿ ಏಕರೂಪಿ. ಇದರಿಂದ ಪುಲ್ಲಿಂಗ, ಸ್ತ್ರೀಲಿಂಗಗಳೆರಡೂ ಒಂದೇ ಮಹತ್ ವರ್ಗಕ್ಕೆ ಸೇರಿದವುಗಳೆಂಬುದು ಸೂಚಿತವಾಗುತ್ತದೆ.

### 2.3.2.3. ವಿಭಕ್ತಿ :

ವೈಯಾಕರಣಿಗಳ ಪ್ರಕಾರ ಕನ್ನಡವೇ ಮೊದಲಾದ ದ್ರಾವಿಡ ಭಾಷೆಗಳಲ್ಲಿ ವಿಭಕ್ತಿಗಳು ಎಂಟು. ಸಂಬೋಧನಾ ವಿಭಕ್ತಿಯನ್ನುಳಿದ, ಪ್ರಥಮ ದ್ವಿತೀಯ ಮೊದಲಾದ ಏಳು ವಿಭಕ್ತಿಗಳು ಪ್ರಸಿದ್ಧ. ಅವುಗಳಿಗೆ ಕ್ರಮವಾಗಿ ಸಪ್ತ ವಿಭಕ್ತಿ ಪ್ರತ್ಯಯಗಳೂ ಇವೆ. ಕೇಶಿರಾಜನು ಅವುಗಳನ್ನು 'ಮಮಿಂಕೆಯದದೊಳ್' ಎಂದು ಸೂತ್ರೀಕರಿಸಿದ್ದಾನೆ. ಸೂತ್ರವನ್ನು ಬಿಡಿಸಿದರೆ :

'ಮ್,ಅಮ್,ಇಮ್,ಕೆ,ಅತ್,ಅ,ಒಳ್' ಎಂದು ಏಳು ರೂಪು ತಳೆಯುತ್ತದೆ. ಇವುಗಳನ್ನು ವೈಯಾಕರಣಿಗಳು ಹಳಗನ್ನಡ ಮತ್ತು ಹೊಸಗನ್ನಡಗಳಲ್ಲಿ ಹೀಗೆ ಇಟ್ಟಿದ್ದಾರೆ.

| | ಹಳಗನ್ನಡ | | ಹೊಸಗನ್ನಡ | |
|---|---|---|---|---|
| | ಪ್ರತ್ಯಯ | ಪದ | ಪ್ರತ್ಯಯ | ಪದ |
| ಪ್ರಥಮಾ ವಿಭಕ್ತಿ : | 'ಮ್' | ರಾಮಂ | 'ಉ' | ರಾಮನು, |
| ದ್ವಿತೀಯಾ ವಿಭಕ್ತಿ : | 'ಅಮ್' | ರಾಮನಂ | 'ಅನ್ನು' | ರಾಮನನ್ನು, |
| ತೃತೀಯಾ ವಿಭಕ್ತಿ : | 'ಇಮ್' | ರಾಮನಿಂ | 'ಇಂದ' | ರಾಮನಿಂದ, |
| ಚತುರ್ಥಿ ವಿಭಕ್ತಿ : | ಗೆ(ಕೆ) | ರಾಮಂಗೆ | (ಗೆ)ಕೆ | ರಾಮನಿಗೆ, |
| ಪಂಚಮಿ ವಿಭಕ್ತಿ : | 'ಅತ್ತಣಿಂ' | ರಾಮನತ್ತಣಿಂ | 'ದೆಸೆಯಿಂದ' | ರಾಮನ ದೆಸೆಯಿಂದ, |
| ಷಷ್ಠೀ ವಿಭಕ್ತಿ : | 'ಅ' | ರಾಮನ | 'ಅ' | ರಾಮನ, |
| ಸಪ್ತಮೀ ವಿಭಕ್ತಿ : | 'ಒಳ್' | ರಾಮನೊಳ್ | | ರಾಮನಲ್ಲಿ |

ವಾಕ್ಯರಚನಾ ಸಂದರ್ಭದಲ್ಲಿ ವಿಭಕ್ತಿ ಪ್ರತ್ಯಯಗಳದು ತುಂಬಾ ಮಹತ್ವದ ಪಾತ್ರ. ಆದರೆ ಮೇಲೆ ಕಾಣಿಸಿದ ಸಪ್ತ ವಿಭಕ್ತಿ ಪ್ರತ್ಯಯಗಳು ದ್ರಾವಿಡದಲ್ಲಿವೆಯೆ

ಎಂಬ ಬಗ್ಗೆ ಆಧುನಿಕ ಭಾಷಾ ವಿಜ್ಞಾನಿಗಳು ಪ್ರಾಚೀನ ವೈಯಾಕರಣರಿಂದ ಭಿನ್ನಾಭಿಪ್ರಾಯವುಳ್ಳವರಾಗಿದ್ದಾರೆ. ಇವರ ಪ್ರಕಾರ ದ್ರಾವಿಡದಲ್ಲಿ ಸಂಸ್ಕೃತದಂತೆ ಶುದ್ಧ ವಿಭಕ್ತಿ ಪ್ರತ್ಯಯಗಳೇ ಇಲ್ಲ. ಕೇಶಿರಾಜ ಕೊಡುವ ಸಪ್ತ ವಿಭಕ್ತಿ ಪ್ರತ್ಯಯಗಳು ಪ್ರತ್ಯಯಗಳೇ ಅಲ್ಲ; ಅವು ದುಂಡು ಪದಗಳು. ಇಲ್ಲವೇ ಸಂಸ್ಕೃತದ ಪ್ರಭಾವದಿಂದ ಕನ್ನಡ ಮೊದಲಾದ ದ್ರಾವಿಡ ಭಾಷೆಗಳಲ್ಲಿ ಕೃತಕವಾಗಿ ರೂಪುಗೊಂಡವುಗಳು ಎಂದು ಅಭಿಪ್ರಾಯ ಪಡುತ್ತಾರೆ ಆಧುನಿಕ ಭಾಷಾ ವಿಜ್ಞಾನಿಗಳು. ಈಗ ಒಂದೊಂದಾಗಿ ಅವುಗಳನ್ನು ಚಿಕಿತ್ಸೆಗೆ ಗುರಿ ಮಾಡೋಣ.

## i) ಪ್ರಥಮಾ ವಿಭಕ್ತಿ ಪ್ರತ್ಯಯ :

ಇದರ ಹಳಗನ್ನಡ ರೂಪ 'ಮ್' ನ ಹೊಸಗನ್ನಡ ರೂಪ 'ಉ' ಎಂದು ಹೇಳುತ್ತಾರೆ ವೈಯಾಕರಣಿಗಳು. ಆದರೆ 'ಮ್' ಆಗಲಿ 'ಉ' ಆಗಲಿ ಪ್ರಥಮಾ ವಿಭಕ್ತಿ ಪ್ರತ್ಯಯಗಳಲ್ಲ. ನಾಮ ಪ್ರಕೃತಿಯೇ ಪ್ರಥಮಾ ವಿಭಕ್ತಿಯ ಅರ್ಥದಲ್ಲಿ ಇದೆ. 'ರಾಮಂ' ಅನ್ನುವಲ್ಲಿ 'ರಾಮ+ಮ್' ಎಂಬ ವಿಭಜನೆ ಸಲ್ಲ. ರಾಮಂ ಎಂಬುದೇ ಶುದ್ಧ ಶಬ್ದರೂಪ. ಆ ರೂಪವೇ ನಾಮ ಪ್ರಕೃತಿ. ಆ ನಾಮ ಪ್ರಕೃತಿ ಪ್ರಥಮಾ ವಿಭಕ್ತ್ಯರ್ಥವನ್ನು ಸೂಚಿಸಿದೆ. ಅಂದರೆ ಪ್ರಕೃತಿಯೇ ವಿಭಕ್ತಿ ಪ್ರತ್ಯಯದ ಕೆಲಸ ಮಾಡಿದೆ. ಅದಕ್ಕೆ ಪ್ರತ್ಯೇಕ ವಿಭಕ್ತಿ ಪ್ರತ್ಯಯದ ಅಗತ್ಯ ಇಲ್ಲ. ಆದ್ದರಿಂದ ದ್ರಾವಿಡದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯ ಇಲ್ಲ.

ಎರಡನೆಯದಾಗಿ, ಹೊಸಗನ್ನಡದಲ್ಲಿ 'ಉ' ಎಂಬ ಕೃತಕ ಪ್ರತ್ಯಯವನ್ನು ವೈಯಾಕರಣಿಗಳು ಸೃಷ್ಟಿಸಿದ್ದಾರೆ. ಇಲ್ಲವೇ ಇದು ತೆಲುಗಿನಿಂದ ಪ್ರಭಾವಗೊಂಡುದಾಗಿರಬೇಕು. ತೆಲುಗಿನಲ್ಲಿ ರಾಮುಡು, ಭೀಮುಡು ಎಂದ ಹಾಗೆ ಕನ್ನಡದಲ್ಲಿ ರಾಮನು, ಭೀಮನು ಎಂದಾಗಿರಬೇಕು. ಅದೂ ಬರೆಹದಲ್ಲಿ, ಆಡು ಮಾತಿನಲ್ಲಲ್ಲ. ತೆಲುಗಿನಲ್ಲೂ ಅದು ಅವಾಸ್ತವ. 'ಮ್' ಎಂಬುದನ್ನು ಸರ್ವನಾಮ ಮೂಲಗಳಿಂದ ಉತ್ಪನ್ನವಾದುದೆಂದೂ ಗುರುತಿಸುತ್ತಾರೆ.

ಒಟ್ಟಿನಲ್ಲಿ, ದ್ರಾವಿಡದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯ ಇಲ್ಲ. ನಾಮ ಪ್ರಕೃತಿಯೇ ಪ್ರಥಮೆಯ ಕಾರ್ಯವನ್ನು ನೆರವೇರಿಸುತ್ತದೆ.

## ii) ದ್ವಿತೀಯಾ ವಿಭಕ್ತಿ ಪ್ರತ್ಯಯ :

ಕೇಶಿರಾಜನ ಪ್ರಕಾರ 'ಅಮ್' ದ್ವಿತೀಯಾ ವಿಭಕ್ತಿ ಪ್ರತ್ಯಯ. ಆದರೆ ಭಾಷಾ

ವಿಜ್ಞಾನಿಗಳ ಪ್ರಕಾರ 'ಅನ್' ಇದು ಪೂರ್ವದ ಹಳಗನ್ನಡದಲ್ಲಿ 'ಆನ್' ಹಳಗನ್ನಡದಲ್ಲಿ 'ಅನ್' ನಡುಗನ್ನಡದಲ್ಲಿ 'ಅನು', ಹೊಸಗನ್ನಡದಲ್ಲಿ 'ಅನ್ನು' ಆಗಿದೆ ಎನ್ನುತ್ತಾರೆ.

ಆದರೆ ಕನ್ನಡದ ದ್ವಿತೀಯಾ ವಿಭಕ್ತಿ ಪ್ರತ್ಯಯವೂ ಶುದ್ಧ ಪ್ರತ್ಯಯ ಅಲ್ಲ, ಪ್ರಥಮೆಯಂತೆ ಸರ್ವನಾಮ ಮೂಲದಿಂದ ಬಂದದ್ದು ಎಂದು ಊಹಿಸುತ್ತಾರೆ.

ಎರಡನೆಯದಾಗಿ, ನಾಮ ಪ್ರಕೃತಿ ಮಾನವೇತರವಾಗಿದ್ದಲ್ಲಿ ಕನ್ನಡ, ತಮಿಳು, ಮಲೆಯಾಳಂ, ಕುಇ ಮತ್ತು ಬ್ರಾಹುಈ ಭಾಷೆಗಳಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯ ಐಚ್ಛಿಕ; ತೆಲುಗು, ಕೋತ, ಗೋಂಡಿ, ಕೊಂಡ, ಗದಬ, ಪರ್ಜಿ ಭಾಷೆಗಳಲ್ಲಿ ನಿರ್ಜೀವ ನಾಮ ಪ್ರಕೃತಿಗಳಲ್ಲಿ ಇದು ಐಚ್ಛಿಕ ಎಂದು ಹೇಳುತ್ತಾರೆ.

**ಉದಾಹರಣೆ :** ರಾವಣನನ್ನು ಕೊಂದನು.

ಇಲ್ಲಿ 'ರಾವಣ ಕೊಂದನು' ಎಂದು ಹೇಳಬರುವುದಿಲ್ಲ.

ಆದರೆ 'ಆಕಳು ಕರುವನ್ನು ಹಾಕಿತು' ಎನ್ನುವಲ್ಲಿ

'ಆಕಳು ಕರು ಹಾಕಿತು' ಎಂದು ಹೇಳಬಹುದು.

ಈ ರೀತಿ ಮಾನವೇತರ (Non-human) ಸಂದರ್ಭಗಳಲ್ಲಿ ದ್ವಿತೀಯ ಐಚ್ಛಿಕ.

ಹೀಗೆ ದ್ವಿತೀಯಾ ವಿಭಕ್ತಿ ಪ್ರತ್ಯಯವು ಸರ್ವನಾಮ ಮೂಲದಿಂದ ಉತ್ಪನ್ನಗೊಂಡಿದೆ ಎಂಬುದರಿಂದಲೂ, ಅದು ಕೆಲವೆಡೆ ಐಚ್ಛಿಕವೇ ಹೊರತು ಅನಿವಾರ್ಯವಲ್ಲ ಎಂಬ ಕಾರಣದಿಂದಲೂ, ಬಹುಶಃ ಒಂದಾನೊಂದು ಕಾಲದಲ್ಲಿ ಅದು ಒಂದು ಪದವೇ ಆಗಿದ್ದು ಕಾಲಕ್ರಮದಲ್ಲಿ ಆ ಪದ ಸವೆದು ಪ್ರತ್ಯಯದ ಛಾಯೆ ತಳೆದಿರಬಹುದು ಎಂಬ ಊಹನೆಯಿಂದಲೂ ದ್ರಾವಿಡದಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯ ಶುದ್ಧ ಸ್ವರೂಪದಲ್ಲಿಲ್ಲ ಎಂದು ಹೇಳಬಹುದು.

### iii) ತೃತೀಯಾ ವಿಭಕ್ತಿ ಪ್ರತ್ಯಯ :

ಇಮ್, ಇಂದಂ, ಇಂದೆ ಎಂದು 'ತೃತೀಯೆ ಮೂದೆಜಿನಾಗಿರ್ಪುದು' ಎಂದು ತೃತೀಯಾ ವಿಭಕ್ತಿ ಪ್ರತ್ಯಯ ರೂಪಗಳನ್ನು ಕೊಡುತ್ತಾನೆ ಕೇಶಿರಾಜ. ಆದರೆ ಇಮ್, ಇಂದ, ಇಂದೆ ಶುದ್ಧ ವಿಭಕ್ತಿ ಪ್ರತ್ಯಯಗಳಲ್ಲ. ಆರಂಭದ ಕಾಲಸೂಚಕ ಕ್ರಿಯಾ ವಿಶೇಷಣವಾಗಿದ್ದ, ಅಂದರೆ ಆ ಕಾಲದಿಂದ ಎಂಬರ್ಥದಲ್ಲಿದ್ದ ಇಮ್ ಅಥವಾ

ಇನ್ ಪ್ರತ್ಯಯಗಳೇ ಅನಂತರದಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯಗಳಾಗಿರಬೇಕು ಇಂದು ವಿದ್ವಾಂಸರು ಊಹಿಸುತ್ತಾರೆ.

ಎರಡನೆಯದಾಗಿ ಇವ್, ಇಂದ, ಇಂದೆಗಳು ಅನುಸರ್ಗ (post positions) ಗಳಾಗಿರುವುದರಿಂದ ಅವು ಪ್ರತ್ಯೇಕ ಪದಗಳೇ ಹೊರತು ಶುದ್ಧ ಪ್ರತ್ಯಯಗಳಲ್ಲ ಎಂತಲೂ ಹೇಳುತ್ತಾರೆ.

ಒಟ್ಟಿನಲ್ಲಿ ಶುದ್ಧ ತೃತೀಯಾ ವಿಭಕ್ತಿ ಪ್ರತ್ಯಯಗಳೂ ದ್ರಾವಿಡದಲ್ಲಿಲ್ಲ ಎಂದು ಹೇಳಬಹುದು.

### iv) ಚತುರ್ಥಿ ವಿಭಕ್ತಿ ಪ್ರತ್ಯಯ :

'ಕೆ', 'ಗೆ', 'ಕ್ಕೆ', 'ಅಕ್ಕೆ', ಇಗೆ' ಎಂಬೆಲ್ಲ ರೂಪಗಳು ಚತುರ್ಥೀ ವಿಭಕ್ತಿ ಪ್ರತ್ಯಯಗಳು. ಮುಖ್ಯವಾಗಿ 'ಕ' ಮತ್ತು 'ಗ' ಎಂಬ ಕಂಠ್ಯಗಳೇ ಈ ಪ್ರತ್ಯಯ ಗಳ ಮೂಲ ಇರಬೇಕು ಎನ್ನುತ್ತಾರೆ. ದ್ರಾವಿಡದಲ್ಲಿ ಹೆಚ್ಚು ವ್ಯತ್ಯಾಸವಿರದ ಪ್ರತ್ಯಯ ಚತುರ್ಥಿ ಒಂದೇ — ಇದನ್ನು ವಿಭಕ್ತಿ ಪ್ರತ್ಯಯ ಎಂದು ಸಂಪೂರ್ಣವಾಗಿ ಒಪ್ಪುವುದಾದರೆ, ಏಕೆಂದರೆ ಚತುರ್ಥಿಯೂ ಸಹ ಒಂದು ಕಾಲದ ಪದ, ಅದರ ಸವೆದ ರೂಪ ಎಂಬ ಊಹೆಯೂ ಇದೆ. ಬಹುಶಃ ಗುಂ, ಕುಂ ಎಂಬ ಆಖ್ಯಾತ ಪ್ರತ್ಯಯಗಳ ಬೇರೆ ರೂಪಗಳಾದ 'ಗೆ' 'ಕೆ' ಕಾಲಾನಂತರದಲ್ಲಿ ಚತುರ್ಥಿಯ ಅರ್ಥ ವನ್ನು ಸಂಕ್ರಮಣಾರ್ಥದ ಮೂಲಕ ಪಡೆಯಿತು ಎಂಬ ಕಾಲ್ಡ್‌ವೆಲ್‌ರ ಅಭಿಮತ ವನ್ನು ಅನೇಕರು ಅನುಮೋದಿಸುತ್ತಾರೆ.

ಹೀಗಾಗಿ ಚತುರ್ಥಿಯೂ ಶುದ್ಧ ವಿಭಕ್ತಿ ಪ್ರತ್ಯಯ ಅಲ್ಲ, ಪದವೊಂದರ ಸವೆದ ರೂಪ ಎಂಬ ಅಭಿಪ್ರಾಯವಿದೆ.

### v) ಪಂಚಮೀ ವಿಭಕ್ತಿ ಪ್ರತ್ಯಯ :

ಹಳಗನ್ನಡದಲ್ಲಿ 'ಅತ್' ಅಥವಾ 'ಅತ್ತಣಿಂ' ಎಂತಲೂ ಹೊಸಗನ್ನಡದಲ್ಲಿ 'ದೆಸೆಯಿಂದ' ಎಂದೂ ಹೇಳುವ ಪಂಚಮೀ ವಿಭಕ್ತಿ ಪ್ರತ್ಯಯ ಪ್ರತ್ಯಯವೇ ಅಲ್ಲ. ಅದೊಂದು ದುಂಡು ದಪ್ಪ ಪದ; ದಿಕ್‌ಸೂಚಿ ಪದ, ಅದೊಂದು ಕೃತಕ ಸೃಷ್ಟಿ. ಅದರ ಅಗತ್ಯ ಇಲ್ಲ. ಆಡು ಭಾಷೆಯಲ್ಲಿ ಅದರ ಬಳಕೆಯೇ ಇಲ್ಲ. ಎಲ್ಲೆಡೆಯೂ ತೃತೀಯಾ ವಿಭಕ್ತಿಯೇ ಪ್ರಯೋಗಗೊಳ್ಳುತ್ತದೆ. 'ಮರದತ್ತಣಿಂ ಪಣ್ಣುಬೀಳ್ದುದು' ಎಂಬುದು ಗ್ರಾಂಥಿಕವಾಗಿರಬಹುದು. ಆದರೆ ಮಾತನಾಡುವಾಗ 'ಮರದಿಂದ ಹಣ್ಣು ಬಿದ್ದಿತು' ಎಂದೇ ಹೇಳುತ್ತೇವೆ. 'ನಾನು ಮನೆಯಿಂದ ಬಂದೆ' ಎನ್ನುತ್ತೇವೆಯೇ

ಹೊರತು 'ಮನೆಯು ದೆಸೆಯಿಂದ ಬಂದೆ' ಎನ್ನೆವು. ಈ ಬಗೆಯ ಪ್ರಯೋಗಗಳನ್ನು 'ವಿಭಕ್ತಿ ಪಲ್ಲಟ' ಎಂಬ ಪಾರಿಭಾಷಿಕ ಪದವಿಟ್ಟು ಕರೆದರೂ ಪಂಚಮಿ ದಿನನಿತ್ಯದ ಆಡುಮಾತಿನಲ್ಲಿಲ್ಲ.

ತೆಲುಗಿನಲ್ಲಿ 'ಉಂಡಿ/ಉಂಚಿ' ಎಂಬುದು 'ಉಂಡು' (ಇರುವುದು) ಎನ್ನುವುದರ ರೂಪಾಂತರವೆಂದು ಹೇಳುತ್ತಾರೆ. ಅಂತಿಮವಾಗಿ ಪಂಚಮೀ ವಿಭಕ್ತಿ ಪ್ರತ್ಯಯ ವೆಂದು ಕರೆಯಲಾದ ಅತ್, ಅತ್ತಣಿಂ ಅಥವಾ ದೆಸೆಯಿಂದ ಎಂಬುದು ಒಂದು ಶುದ್ಧ ದಿಕ್ಸೂಚಿ ಪದವೇ ಹೊರತು ಪ್ರತ್ಯಯ ಅಲ್ಲ. ಪಂಚಮೀ ವಿಭಕ್ತಿ ಪ್ರತ್ಯಯ ಆಡು ಭಾಷೆಯಲ್ಲಿ ಬಳಕೆಯಲ್ಲಿ ಇಲ್ಲವೇ ಇಲ್ಲ. ಈ ಪಂಚಮ್ಯರ್ಥದಲ್ಲಿ ತೃತೀಯೆಯೇ ಬಳಕೆಯಾಗುತ್ತದೆಯಾದ್ದರಿಂದ ಪಂಚಮೀ ವಿಭಕ್ತಿ ಪ್ರತ್ಯಯ ಇಲ್ಲ.

### vi) ಷಷ್ಠೀ ವಿಭಕ್ತಿ ಪ್ರತ್ಯಯ :

'ಅ' ಎಂಬುದು ಷಷ್ಠೀ ಪ್ರತ್ಯಯ. ತಮಿಳಿನಲ್ಲಿ 'ಅತ್' 'ಅತ್ತು' ಎಂತಲೂ 'ಅ' ಎಂತಲೂ ಇದೆ. ಆದರೆ ಇದೂ ಶುದ್ಧ ಪ್ರತ್ಯಯ ಅಲ್ಲ. ಅದು ಸವೆದು 'ಅ' ಆಗಿದೆ. ಅಮ ಮರ = ಆ ಮರ, ಇದು ಮರ = ಈ ಮರ, ಉರು ಮರ = ಊಮರ — ಎಂಬ ದರ್ಶಕ ಸರ್ವನಾಮದ ಸವೆದೊಂದು ರೂಪ ಷಷ್ಠೀ ವಿಭಕ್ತಿ ಪ್ರತ್ಯಯವೆನ್ನಿಸಿಕೊಂಡಿದೆ, ಆದ್ದರಿಂದ'ಆ' ಅಥವಾ 'ಅ' ಎಂಬ ಷಷ್ಠೀ ವಿಭಕ್ತಿ ಪ್ರತ್ಯಯ ಅಲ್ಲ. ಅದೊಂದು ವಸ್ತು ನಿರ್ದೇಶಕ ಪದ.

ಷಷ್ಠಿ ಎಲ್ಲ ವಿಭಕ್ತಿಗಳೂ ಆಧಾರಭೂತವಾದದ್ದು ಎಂದಿದ್ದಾನೆ ಕೇಶಿರಾಜ.

**ಉದಾಹರಣೆ :** ಮರ + ಅಮ್ = ಮರನಮ್
ಮರ + ಇಮ್ = ಮರದಿಂ
ಮರ + ಕ್ಕೆ = ಮರಕ್ಕೆ
ಮರ + ಅತ್ತಣಿಂ = ಮರದತ್ತಣಿಂ
ಮರ + ಅ = ಮರದ
ಮರ + ಒಳ್ = ಮರದೊಳ್

ಇಲ್ಲಿ 'ಮರ' ಎಂಬ ಪೂರ್ವ ಪದದ ಅಂತ್ಯ ವರ್ಣದ ಮೇಲಿರುವ 'ಅ' ಷಷ್ಠೀ ವಿಭಕ್ತಿ ಪ್ರತ್ಯಯ.

### (vii) ಸಪ್ತಮೀ ವಿಭಕ್ತಿ ಪ್ರತ್ಯಯ :

ಕನ್ನಡದಲ್ಲಿ ಉಳ್/ಒಳ್/ಒಳಗೆ/ಅಲ್ಲಿ, ತಮಿಳಿನಲ್ಲಿ ಉಳ್/ಇಲ್, ತೆಲುಗಿನಲ್ಲಿ

ಲೋ—ಎಂಬಿವು ಸಪ್ತಮೀ ವಿಭಕ್ತಿ ಪ್ರತ್ಯಯಗಳು ಎಂದು ಹೇಳುತ್ತಾರೆ. ಆದರೆ ಸಪ್ತಮಿ ಒಂದು ಶುದ್ಧ ಸ್ಥಾನ ನಿರ್ದೇಶಕ ಪದ. ಒಳಗೆ, ಹೊರಗೆ, ಮೇಲೆ, ಕೆಳಗೆ ಇವು ಸ್ಥಾನ ನಿರ್ದೇಶಕ ಪದಗಳು. ಪದವೇ ಇಲ್ಲಿ ಪ್ರತ್ಯಯದ ಕೆಲಸ ಮಾಡಿದೆ ಎನ್ನಬಹುದು.

ತಮಿಳು, ಮಲೆಯಾಳಂಗಳಲ್ಲಿನ 'ಅಗ' ಎಂಬುದರ ಅರ್ಥ ಒಳಗೆ, ಮನೆ ಎಂದು. ಇಂದು ಉತ್ತರ ಕರ್ನಾಟಕದವರು 'ಕೈಯಾಗ ತಿಂದೆ'. 'ಮನೆಯಾಗ ಐತಿ' ಎನ್ನುತ್ತಾರೆ. ಅಲ್ಲಿನ 'ಆಗ' ತಮಿಳು, ಮಲೆಯಾಳಂಗಳ 'ಅಗ' ಅಂದರೆ ಒಳಗೆ ಎಂಬರ್ಥವುಳ್ಳವುಗಳು. ಒಟ್ಟಿನಲ್ಲಿ ಸಪ್ತಮಿಯೂ ಒಂದು ಸ್ಥಾನ ನಿರ್ದೇಶಕ ಪದವೇ ಹೊರತು ಪ್ರತ್ಯಯ ಅಲ್ಲ.

ಒಟ್ಟಿನಲ್ಲಿ, ಸಪ್ತ ವಿಭಕ್ತಿ ಪ್ರತ್ಯಯಗಳ ಬಗೆಗೆ ಹೇಳುವುದಾದರೆ ಕನ್ನಡ ಅಥವಾ ದ್ರಾವಿಡದಲ್ಲಿ ಪ್ರತ್ಯೇಕ ಪ್ರತ್ಯಯಗಳೇ ಇಲ್ಲ, ಎಲ್ಲವೂ ಒಂದಲ್ಲ ಒಂದು ವಿಧದಲ್ಲಿ ಪದಗಳೇ ಆಗಿವೆ. ಅವು ಕಾಲಕ್ರಮೇಣ ರೂಪಾಂತರ ಹೊಂದಿ ಮೂಲ ರೂಪ ಹೇಗಿತ್ತೆಂದು ಗುರುತಿಸಲಾಗದಷ್ಟು ಬದಲಾಗಿವೆ. ಪ್ರಥಮಾ ಮತ್ತು ಪಂಚಮಿಗಳಂತೂ ಇಲ್ಲವೇ ಇಲ್ಲ ಎಂದು ಸೈದ್ಧಾಂತಿಸಬಹುದು, ಮತ್ತು ದ್ರಾವಿಡ ವಿಭಕ್ತಿ ವಿಚಾರ ಸಂಸ್ಕೃತದ ವಿಭಕ್ತಿ ವಿಚಾರದಿಂದ ತೀರಾ ಭಿನ್ನ ಮತ್ತು ವಿಶಿಷ್ಟ ಎಂದು ಹೇಳಬಹುದು.

**(viii) ಸಂಬೋಧನಾ ವಿಭಕ್ತಿ ಪ್ರತ್ಯಯ :**

ಎ, ಆ, ಓ–ಗಳು ಸಂಬೋಧನಾ ವಿಭಕ್ತಿ ಪ್ರತ್ಯಯಗಳು ಎಂದು ನಿರ್ಧರಿಸಿ ಮೂಲ ದ್ರಾವಿಡದಲ್ಲಿ ಇವನ್ನು ಪುನರ್ರಚಿಸಿದ್ದಾರೆ. ಆದರೂ ಸಂಬೋಧನೆ ಅಮುಖ್ಯ.

**(ix)** ದ್ರಾವಿಡದಲ್ಲಿ ಪೂರ್ವ ಪ್ರತ್ಯಯ (Pre Position) ಇಲ್ಲ, ಉತ್ತರ ಪ್ರತ್ಯಯ (Post Position) ಉಂಟು. ಅಂದರೆ ನಾಮಪದಗಳಿಗೆ ಪ್ರತ್ಯಯಗಳು ಪದಾಂತ್ಯದಲ್ಲಿ ಹತ್ತುತ್ತವೆ, ಪದದ ಮೊದಲಲ್ಲ.

ಉದಾಹರಣೆಗೆ : ಪದ ಪ್ರತ್ಯಯ
ರಾಮನ+ಅನ್ನು
ರಾಮನ+ಇಂದ ಇತ್ಯಾದಿ.

ಇಂಗ್ಲಿಷ್ ಮೊದಲಾದ ಭಾಷೆಗಳಲ್ಲಿ :

To Rama
From Rama ಇತ್ಯಾದಿ.

## 2.3.2.4. ಸರ್ವನಾಮಗಳು :

(i) ನಾಮಪದಗಳ ಸ್ಥಾನದಲ್ಲಿ ಬರುವ, ವಸ್ತುವಿನ ಅಥವಾ ವಿಷಯದ ಹೆಸರನ್ನು ಹೇಳದೆ ಅದನ್ನು ಗುರುತಿಸಲು ಸೂಚಿಸುವ ಬೇರೊಂದು ಪದವೇ ಸರ್ವನಾಮ. ಸರ್ವನಾಮಗಳು ಒಂದು ಭಾಷೆಯ ವಿಶೇಷಗಳು; ಸ್ಥಿರವಾದವುಗಳೂ ಹೌದು.ಒಂದು ಭಾಷಾ ಪರಿವಾರ ಹುಟ್ಟಿ ಎಷ್ಟೋ ಕವಲೊಡೆದು ಭಿನ್ನರೂಪಧಾರಣ ಮಾಡಿದ್ದರೂ ಸರ್ವನಾಮಗಳು ಸ್ಪಷ್ಟ ಹಾಗೂ ಸ್ಫುಟ. ಅವು ತಮ್ಮ ಘಟ್ಟಿತನವನ್ನು ಉಳಿಸಿಕೊಂಡೇ ಇರುತ್ತವೆ. ಆದ್ದರಿಂದ ಭಾಷಾವರ್ಗೀಕರಣ ಸಂದರ್ಭದಲ್ಲಿ ಸರ್ವ ನಾಮಗಳು ತುಂಬಾ ಸಹಕಾರಿ.

(ii) ನಾಮಪದಗಳಂತೆಯೇ ಸರ್ವನಾಮಗಳಿಗೂ ಲಿಂಗ, ವಚನ, ವಿಭಕ್ತಿ ಪ್ರತ್ಯಯಗಳು ಔಚಿತ್ಯವರಿತು ಹತ್ತುತ್ತವೆ. ವ್ಯರ್ಥವಾಗದ ಅರ್ಥ ಕೊಡುತ್ತವೆ. ಆದರೆ ವಿಭಕ್ತಿ ಪ್ರತ್ಯಯಗಳು ಸರ್ವನಾಮಗಳ ಜೊತೆ ಕೂಡುವಾಗ ಸರ್ವನಾಮದಲ್ಲಿನ ಆದಿದೀರ್ಘ ಹ್ರಸ್ವ ವಾಗುತ್ತದೆ.

ಉದಾಹರಣೆ : ನಾನ್ ನನಗೆ ; ನೀನ್ ನಿನಗೆ
ನಾವ್ ನಮಗೆ ; ನೀವ್ ನಿಮಗೆ ಇತ್ಯಾದಿ.

(iii) ಪುರುಷ ವಾಚಕ, ಆತ್ಮಾರ್ಥಕ, ಪ್ರಶ್ನಾರ್ಥಕ, ಗೌರವಾರ್ಥಕ, ಸಂಬಂಧ ಸೂಚಕ ಎಂದೆಲ್ಲ ರೂಪಗಳಿವೆ ಸರ್ವನಾಮಗಳಲ್ಲಿ. ಅವುಗಳ ವಿವರ ನೋಡಿ.

### (ಅ) ಪುರುಷ ವಾಚಕ ಸರ್ವನಾಮಗಳು (Personal Pronouns)

(i) ಪ್ರಥಮ ಪುರುಷ :
ಏಕವಚನ : ಅವನು, ಅವಳು, ಅದು
ಬಹುವಚನ : ಅವರು, ಅವು

i) ಮಧ್ಯಮ ಪುರುಷ :
ಏಕವಚನ : ನೀನು
ಬಹುವಚನ : ನೀವು

(iii) ಉತ್ತಮ ಪುರುಷ :
ಏಕವಚನ : ನಾನು
ಬಹುವಚನ : ನಾವು

ಇವುಗಳಲ್ಲಿ ಪ್ರಥಮ ಪುರುಷ ಏಕವಚನ, ಬಹುವಚನ, ಸರ್ವನಾಮಗಳು ಕರ್ತೃವಿನ ಲಿಂಗವನ್ನು ಸೂಚಿಸುತ್ತವೆ. ಮಧ್ಯಮ ಮತ್ತು ಉತ್ತಮ ಪುರುಷಗಳಲ್ಲಿ ವಚನ ವಿವಕ್ಷೆ ಇದೆ. ಲಿಂಗವಿವಕ್ಷೆ ಇಲ್ಲ, ಇದು ದ್ರಾವಿಡದ ವಿಶೇಷ.

**(ಆ) ಆತ್ಮಾರ್ಥಕ ಸರ್ವನಾಮಗಳು :**

ತಾನ್—ತಾವಲ್—ತಾವು

ಕನ್ನಡದಲ್ಲಿರುವ ಆತ್ಮಾರ್ಥಕ ಸರ್ವನಾಮಗಳು

ಉದಾಹರಣೆ : ತಾನಾಯ್ತು ತನ್ನ ಮನೆಯಾಯ್ತು,
ತಾವು ಉಂಡರೆಷ್ಟು ಬಿಟ್ಟರೆಷ್ಟು.

ಆತ್ಮಾರ್ಥಕ ಸರ್ವನಾಮಗಳಲ್ಲಿ ವಚನ ವಿವಕ್ಷ ಇದೆ, ಲಿಂಗ ವಿವಕ್ಷೆ ಇಲ್ಲ.

**(ಇ) ಪ್ರಶ್ನಾರ್ಥಕ ಸರ್ವನಾಮಗಳು :**

ಯಾವನು, ಯಾವಳು, ಯಾರು,
ಯಾವುದು, ಯಾವುವು,
ಏನು, ಏಕೆ.

ಈ ಪ್ರಶ್ನಾರ್ಥಕ ಸರ್ವನಾಮಗಳಲ್ಲಿ ಪುರುಷಾರ್ಥಕ ಸರ್ವನಾಮಗಳಂತೆ ಲಿಂಗ ಮತ್ತು ವಚನ ವಿವಕ್ಷೆ ಇದೆ.

**(ಈ) ಗೌರವಾರ್ಥಕ ಸರ್ವನಾಮಗಳು :**

ಕನ್ನಡದಲ್ಲಿ : ಆತ, ಊತ, ಈತ, ಆಕೆ, ಯಾಕೆ, ಈಕೆ.
ತೆಲುಗಿನಲ್ಲಿ : ಆತಡು, ಈತಡು.

ಕರ್ತೃ ಏಕವಚನದಲ್ಲಿದ್ದರೂ ಗೌರವಸೂಚಕವಾಗಿ ಪದ ಬಳಸುವುದುಂಟು. ಇದು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಪ್ರಸಿದ್ಧ. ಇವು ದರ್ಶಕ ಸರ್ವನಾಮಗಳಷ್ಟೇ ಅಲ್ಲದೆ, ಲಿಂಗವನ್ನೂ ಸೂಚಿಸುತ್ತವೆ.

**(ಉ) ಸಂಬಂಧಾರ್ಥಕ ಸರ್ವನಾಮಗಳು :**

ದ್ರಾವಿಡದಲ್ಲಿ ಸಂಸ್ಕೃತದಂತೆ ಸಂಬಂಧಾರ್ಥಕ ಸರ್ವನಾಮಗಳಿಲ್ಲ ಆದರೆ—

'ಯಾವನು ದೇಶಕ್ಕಾಗಿ ಮಡಿದನೋ ಅವನು' ಎಂಬ ಎರಡು ಸರ್ವನಾಮಗಳ ಕ್ವಚಿತ್ ಪ್ರಯೋಗ ಉಂಟು. ಆದರೆ ಈ ಬಗೆಯ

ರಚನೆ ದ್ರಾವಿಡದ ಜಾಯಮಾನದ್ದಲ್ಲ, ಆದ್ದರಿಂದ ದ್ರಾವಿಡದಲ್ಲಿ ಅದಿಲ್ಲ.

(iv) ದ್ರಾವಿಡ ಸರ್ವನಾಮಗಳಲ್ಲಿನ 'ನಾವು' ಎಂಬ ಉತ್ತಮ ಪುರುಷ ಬಹುವಚನ ರೂಪವು ಅಭಿವ್ಯಾಪಕ (Inclusive) ಮತ್ತು ವ್ಯಾವರ್ತಕ (Exclusive) ಎರಡೂ ಸಂದರ್ಭಗಳಲ್ಲಿ ಪ್ರಯೋಗಗೊಂಡಾಗ ಏಕರೂಪದಲ್ಲಿಯೇ ಇರುತ್ತದೆ.

ಉದಾಹರಣೆಗೆ : ನಾವು ಭಾರತೀಯರು
ನಾವು ಹಿಂದೂಗಳು, ನೀವು ?

ಇಲ್ಲಿ ಮೊದಲನೆಯ ಸರ್ವನಾಮ 'ನಾವು' ಎಂಬುದು ಅಭಿವ್ಯಾಪಕ. ಅಂದರೆ ಎದುರಲ್ಲಿರುವವರನ್ನೂ ಸೇರಿಸಿಕೊಂಡು ಎಂಬರ್ಥ ಕೊಟ್ಟರೆ, ಎರಡನೆಯದು 'ನಾವು ಹಿಂದುಗಳು ನೀವು ?' ಎಂದಾಗ ಎದುರಿನವರನ್ನು ಬಿಟ್ಟು ಎಂಬರ್ಥ ಸೂಚಿಸುತ್ತದೆ. ಹೀಗೆ 'ನಾವು' ಎಂಬ ಉತ್ತಮ ಪುರುಷ ಬಹುವಚನ ಸರ್ವನಾಮವು ಎದುರು ಒಳಗೊಂಡ ಮತ್ತು ಎದುರುಬಿಟ್ಟ ಎರಡೂ ಕಡೆ ಏಕರೂಪದಲ್ಲಿ ಪ್ರಯೋಗಗೊಳ್ಳುವುದುಂಟು. ಇದು ದ್ರಾವಿಡದ ವೈಶಿಷ್ಟ್ಯ. ಇಂಡೋ-ಯೂರೋಪಿಯನ್ ಭಾಷೆಗಳಲ್ಲಿ ಇಲ್ಲ.

(v) ದ್ರಾವಿಡದಲ್ಲಿ ಸಮೀಪದರ್ಶಕ, ಮಧ್ಯದರ್ಶಕ ಮತ್ತು ದೂರದರ್ಶಕ ಎಂಬ ಮೂರು ಬಗೆಯ ಸರ್ವನಾಮಗಳಿವೆ.

| ಉದಾಹರಣೆ : | **ಸಮೀಪ** | **ಮಧ್ಯ** | **ದೂರ** |
|---|---|---|---|
| | ಇವನು | ಉವನು | ಅವನು |

ಆದರೆ ಮಧ್ಯದರ್ಶಕ ಸರ್ವನಾಮವು ಹಳಗನ್ನಡದಲ್ಲಿ ಮಾತ್ರ ಉಳಿದಿದೆ, ಹೊಸಗನ್ನಡದಲ್ಲಿಲ್ಲ. ಇದೇ ರೀತಿ ಇನ್ನೂ ಕೆಲವು ದ್ರಾವಿಡ ಭಾಷೆಗಳಲ್ಲಿಲ್ಲ.

### 2.3.2.5. ಗುಣವಾಚಕಗಳು :

(i) ದ್ರಾವಿಡ ಭಾಷೆಗಳ ಗುಣವಾಚಕಗಳನ್ನು ಕುರಿತು ವಿದ್ವಾಂಸರಲ್ಲಿ ಒಮ್ಮತ ಇಲ್ಲ, ಕಾಲ್ಡ್‌ವೆಲ್ ಪ್ರತ್ಯೇಕ ಹಾಗೂ ಸ್ವತಂತ್ರ ಗುಣವಾಚಕಗಳೇ ದ್ರಾವಿಡದಲ್ಲಿಲ್ಲ ; ನಾಮವಾಚಕಗಳೇ ಗುಣವಾಚಕಗಳಾಗಿವೆ

ಎನ್ನುತ್ತಾರೆ. ಅಂತೆಯೇ ಕೃದಂತಗಳೊ ತದ್ಧಿತಾಂತಗಳೊ ಗುಣವಾಚಕದ ಕೆಲಸವನ್ನು ಮಾಡಿ ಮುಗಿಸುತ್ತವೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಉದಾಹರಣೆ: ನಾಮವಾಚಕಕ್ಕೆ : 1. ಪೊನ್ ಅರಿದು
(ಚಿನ್ನ ಸಿಗುವುದು ಕಷ್ಟ)
2. ಪೊನ್ ಮುಡಿ
(ಚಿನ್ನದ ಕಿರೀಟ)

ಮೇಲಿನ ಮೊದಲ 'ಪೊನ್' ನಾಮಪದ, ಎರಡನೆಯ 'ಪೊನ್' ಗುಣವಚನರೂಪಿ ನಾಮಪದ.

**ಕೃದಂತಕ್ಕೆ :** ಅಳುವ ಕಂದನ ತುಟಿಯು ಇಲ್ಲಿನ 'ಅಳುವ' ಎಂಬ ಕೃದಂತ 'ಕಂದ' ಬುದಕ್ಕಿರುವ ವಿಶೇಷಣ (ಗುಣವಚನ).

**ತದ್ಧಿತಾಂತಕ್ಕೆ :** ಪಣವುಳ್ಳ,
ಇಲ್ಲಿ 'ಪಣ' (ಹಣ) ಎಂಬ ನಾಮಪದಕ್ಕೆ 'ಉಳ್ಳ' ಎಂಬ ತದ್ಧಿತ ಪ್ರತ್ಯಯ ಹತ್ತಿ 'ಪಣವುಳ್ಳ' ಎಂಬ ಗುಣವಿಶೇಷಣ ಆಗಿದೆ.
ಆದ್ದರಿಂದ ದ್ರಾವಿಡದಲ್ಲಿ ಶುದ್ಧ ಹಾಗೂ ಸ್ವತಂತ್ರ ಗುಣವಚನಗಳೇ ಇಲ್ಲ, ಕಾಲ್ಡ್‌ವೆಲ್‌ರ ಈ ವಾದವನ್ನು ಒಪ್ಪದವರೂ ಇದ್ದಾರೆ.

(ii) ಗುಣವಚನಗಳನ್ನು ವಿಶೇಷಣಗಳು ಎಂದು ಕರೆಯುತ್ತಾರೆ. ದ್ರಾವಿಡದಲ್ಲಿ ವಿಶೇಷಣಗಳು ಸಂಸ್ಕೃತದಂತೆ ವಿಶೇಷ್ಯದ ಲಿಂಗ ವಚನಗಳನ್ನು ಆಧರಿಸಿ ಪ್ರಯೋಗಗೊಳ್ಳುವುದಿಲ್ಲ.

ಉದಾಹರಣೆ : ಪಿತೃವಾಕ್ಯ ಪರಿಪಾಲಕನಿಂದ, ಸದ್ಗುಣ ಸಂಪನ್ನನಿಂದ, ವಾತ್ಸಲ್ಯಮೂರ್ತಿಯಿಂದ, ಭ್ರಾತೃಪ್ರೇಮಿಯಿಂದ ರಾಮನಿಂದ....

ಈ ರೀತಿ ವಿಶೇಷ್ಯವನ್ನು ಆಧರಿಸಿದ ವಿಶೇಷಣಗಳು ಸಂಸ್ಕೃತದಲ್ಲುಂಟು. ಇಲ್ಲಿ 'ರಾಮ' ವಿಶೇಷ್ಯ, ಪಿತೃವಾಕ್ಯಪರಿಪಾಲಕ ಇತ್ಯಾದಿಗಳು ವಿಶೇಷಣಗಳು. ವಿಶೇಷ್ಯ 'ಇಂದ' ಎಂಬ ತೃತೀಯಾವಿಭಕ್ತಿಯಲ್ಲಿರುವುದರಿಂದ ವಿಶೇಷಣಗಳೂ ತೃತೀಯಾ ವಿಭಕ್ತಿ ಪ್ರತ್ಯಯವನ್ನು ಹೊಂದಿರಬೇಕಾದ ಅನಿವಾರ್ಯವಿದೆ. ಇದು ಸಂಸ್ಕೃತದ ಸೊಗಸು—

ಆದರೆ—ದ್ರಾವಿಡದಲ್ಲಿ ಈ ರಚನೆ ಇಲ್ಲ. 'ಊ–ಆದ' ಎಂಬ ಸಮುಚ್ಚಯದ ಬಳಕೆ ಇದೆ.

**ಉದಾಹರಣೆಗೆ :**

ಪಿತೃವಾಕ್ಯ ಪರಿಪಾಲಕನೂ, ಸದ್ಗುಣಸಂಪನ್ನನೂ, ವಾತ್ಸಲ್ಯಮೂರ್ತಿಯೂ, ಭ್ರಾತೃಪ್ರೇಮಿಯೂ ಆದ ರಾಮನಿಂದ.......ಹೀಗೆ ರಚನೆಯಲ್ಲಿ ವಿಶೇಷ್ಯದ ವಿಭಕ್ತಿಯನ್ನು ಹಚ್ಚದೆ ವಿಶೇಷಣಗಳನ್ನು ಬಳಸುವುದು ದ್ರಾವಿಡದ ಸೊಗಸು.

**iii) ತರತಮ ಭಾವ** (Degrees) :

ವಿಶೇಷಣಗಳು ಪ್ರಯೋಗಗೊಂಡಾಗ ಇಂಡೋ-ಯುರೋಪಿಯನ್ ಭಾಷೆಗಳಲ್ಲಿ ತರ-ತಮ ಭಾವ ಸಾಮಾನ್ಯ.

**ಉದಾಹರಣೆ :** ಇವನು ಸುಂದರ (Beautiful)
ಇವನು ಸುಂದರ ತರ(More beautiful)
ಇವನು ಸುಂದರ ತಮ (Most beautiful)

ಆದರೆ ದ್ರಾವಿಡದಲ್ಲಿ ಈ ಪ್ರಯೋಗವಿಲ್ಲ.
ಇವನು ಸುಂದರ.
ಇವನು ಅವನಿಗಿಂತ ಸುಂದರ.
ಇವನು ಎಲ್ಲರಿಗಿಂತ ಸುಂದರ.

ಹೀಗೆ 'ಗಿಂತ' ಪ್ರತ್ಯಯವಲ್ಲಿ ತರ-ತಮ ಭಾವವನ್ನು ಪೂರೈಸುತ್ತೇವೆ. ಇದು ದ್ರಾವಿಡದ ವೈಶಿಷ್ಟ್ಯ.

**2.3.2.6. ಸಂಖ್ಯಾವಾಚಕಗಳು :**

i) ಭಾಷಾ ನಿರ್ಣಯಕ್ಕೆ ಸರ್ವನಾಮಗಳಂತೆ ಸಂಖ್ಯಾವಾಚಕಗಳು ತುಂಬು ಸಹಕಾರಿ. ಕೆಲವನ್ನು ಗಮನಿಸಿರಿ. ಸಂಸ್ಕೃತಾದಿಗಳ ಭಿನ್ನರೂಪದ ಸಂಖ್ಯಾವಾಚಕಗಳು ದ್ರಾವಿಡದಲ್ಲಿಲ್ಲ. ದ್ರಾವಿಡವಲ್ಲಿ ಏಕರೂಪತೆ ಉಂಟು.

| ಉದಾ : | ಕ | ತೆ | ತ | ಮ | ತು | ಕೋ | ಸಂ |
|---|---|---|---|---|---|---|---|
| | ಒಂದು | ಒಕ | ಒನ್ರು | ಒನ್ನು | ಒರಿ | ಒರ್ | ಏಕ |
| | ಎರಡು | ರೆಂಡು | ಇರೆಂಡು | ರಂಡು | ಎಯ್‌ಡ್ | ರಡ್ಡು | ದ್ವಿ |

ಇತ್ಯಾದಿ.

ii) ದ್ರಾವಿಡದಲ್ಲಿ ಮಾನವ ಮತ್ತು ಮಾನವೇತರ ಸಂಖ್ಯಾವಾಚಕಗಳಿವೆ.

**ಉದಾಹರಣೆ :** ಅವನಿಗೆ **ಒಬ್ಬ** ಮಗನಿದ್ದಾನೆ.
ಇವನಿಗೆ **ಒಂದು** ಹಸು ಇದೆ.

iii) ದ್ರಾವಿಡದಲ್ಲಿ ಒಂದರಿಂದ ನೂರರವರೆಗೆ ಅನಂತರ 999ರ ವರೆಗೆ ಮಾತ್ರ ಎಣಿಕೆ ಇದೆ. ಸಾವಿರಕ್ಕೆ ಶಬ್ದ ಇಲ್ಲ. ಸಹಸ್ರ> ಸಾಸಿರ> ಸಾವಿರ (ಆಯಿರ) ಆಗಿದೆ.

(iv) ಒಂಬತ್ತು ಎಂಬುದು ಸಂಸ್ಕೃತದಲ್ಲಿ 'ನವ' ಅಂದರೆ ಹೊಸದು. ಕನ್ನಡದಲ್ಲಿ ಒರ್+ಪತ್ತು ಅಂದರೆ ಹತ್ತಕ್ಕೆ ಒಂದು ಕಡಿಮೆ ಎಂಬರ್ಥದಲ್ಲಿ ಬಂದಿದೆ. ಆದರೆ 'ತೊಂಬತ್ತು' ಎಂಬುದು ಕನ್ನಡದಲ್ಲಿ ವ್ಯಾಕರಣ ರೀತ್ಯಾ ದೋಷವುಳ್ಳ ಪ್ರಯೋಗವಾಗಿದೆ.

ತೊಲ್+ಪತ್ತು = ತೊಲ್‌ಪತ್ತು> ತೊಂಬತ್ತು ಆಗಿದೆ.

ತೊಲ್ ಅಥವಾ ತೊಲಿ ಎಂದರೆ 'ಮೊದಲು' ಎಂದು. ಅಂತಾದಾಗ ತೊಲ್+ಪತ್ತು = ತೊಂಬತ್ತು ಎಂಬುದು ಹತ್ತಕ್ಕೆ ಮೊದಲು ಅಂದರೆ 9 ಆಗಬೇಕೇ ವಿನಾ 90 ಆಗಬಾರದು. ಆದರೆ ರೂಢಿಯಲ್ಲಿ ಬಂದು ಅದು ಸಹಜವೇ ಎನ್ನುವಷ್ಟು ಮಟ್ಟಿಗೆ ಪ್ರಯೋಗವಾಗಿದೆ.

ತಮಿಳಿನಲ್ಲಿ 90ಕ್ಕೆ 'ತೊಣ್ಣೂರ್' ಎನ್ನುತ್ತಾರೆ. ಅಂದರೆ 'ನೂರಕ್ಕೆ ಮೊದಲು' ಅರ್ಥಾತ್ 90. ಇದು ಸರಿಯಾಗಿದೆ.

**2.3.2.7. ಕ್ರಿಯಾಪದಗಳು :**

(i) ಸಂಖ್ಯಾ ಸರ್ವನಾಮಗಳಂತೆ ಕ್ರಿಯಾಪದಗಳೂ ಒಂದು ಭಾಷೆಯ ಸ್ಥಿರ ಶಬ್ದಗಳು. ಹೀಗಿದ್ದರೂ 'ದ್ರಾವಿಡದಲ್ಲಿ ನ್ಯಾಯವಾಗಿ ಕ್ರಿಯಾಪದವೇ ಇಲ್ಲ' ಎಂದು ಅಭಿಪ್ರಾಯ ಪಡುತ್ತಾರೆ ಕಾಲ್ಡ್‌ವೆಲ್. ಅಂದರೆ ಕ್ರಿಯಾರ್ಥದ ಧಾತುಗಳೇ ದ್ರಾವಿಡದಲ್ಲಿಲ್ಲ ಎಂದರ್ಥವಲ್ಲ. ಕ್ರಿಯಾಪದದ ಕೆಲಸ ಬೇರೆ ಬೇರೆ ರೂಪದ ಪದಗಳ ಮೂಲಕ ನೆರವೇರುತ್ತದೆ ಎಂದು. ಅಂದರೆ (೧) ಆಖ್ಯಾತ ಪ್ರತ್ಯಯವೇ ಕ್ರಿಯಾಪದದ ಕೆಲಸ ಮಾಡಿ ಮುಗಿಸುತ್ತದೆ.

**ಉದಾಹರಣೆ :** ಕವಿ ಕೇಶವನೆನ್ – (ನಾನು ಕವಿ ಕೇಶವನು)

ಇದು 'ನಾನು ಕವಿ ಕೇಶವನಾಗಿದ್ದೇನೆ' ಎಂಬರ್ಥ ಕೊಡುತ್ತದೆ. 'ಎ
ಎಂಬ ಆಖ್ಯಾತ ಪ್ರತ್ಯಯ ಕ್ರಿಯಾ ಪದದ 'ಆಗಿದ್ದೇನೆ' ಎಂಬುದ
ಪೂರೈಸುತ್ತದೆ. ಈ ರೀತಿ ಆಖ್ಯಾತ ಪ್ರತ್ಯಯವೇ ಕ್ರಿಯಾಪ
ಅರ್ಥ ಕೊಡುವುದು ದ್ರಾವಿಡದ ಅದರಲ್ಲೂ ಕನ್ನಡದ ವೈಶಿಷ್ಟ್ಯ. ಇ
ಸಂಸ್ಕೃತಾದಿ ಇಂಡೋ–ಯುರೋಪಿಯನ್ ಭಾಷೆಗಳಲ್ಲಿಲ್ಲ.

(ii) ಕೆಲವು ಕ್ರಿಯಾಪದಗಳು ನಾಮವಾಚಕ ಕ್ರಿಯಾವಾಚಕ ಎರಡೂ ಆಗಿ
ವುದುಂಟು.

ಉದಾಹರಣೆ : ಕಟ್ಟು–ಕಟ್ಟುವುದು–ಕ್ರಿಯೆ
ಒಂದು ಕಟ್ಟು–ನಾಮ
ಮೆಟ್ಟು–ಮೆಟ್ಟುವುದು–ಕ್ರಿಯೆ
ಚಪ್ಪಲಿ–ನಾಮ

(iii) ಕನ್ನಡದಲ್ಲಿ ಒಂದು ಕ್ರಿಯಾಪದವೇ ಒಂದು ಸಮಗ್ರ ವಾಕ್ಯದ
ಪ್ರಯೋಗವಾಗುತ್ತದೆ.

ಉದಾಹರಣೆ : ಬಂದನು = (ಅವನು ಬಂದನು)
ಬಂದಳು = (ಅವಳು ಬಂದಳು)
ಬಂದರು = (ಅವರು ಬಂದರು)

(iv) ದ್ರಾವಿಡದಲ್ಲಿ ಕೆಲವೆಡೆಗಳಲ್ಲಿ ಕ್ರಿಯಾಪದ ಅನಿವಾರ್ಯ ಅಲ್ಲ. ಕ್ರಿಯ
ವನ್ನು ಬಿಟ್ಟು ರಚಿಸುವುದು, ನುಡಿಯುವುದು ಭಾಷೆಯ ಸೊಗಸು.

---

9. ಆಖ್ಯಾತ ಪ್ರತ್ಯಯಗಳಿಗೆ ಕೇಶಿರಾಜ 'ಅಮರಯಿರೆನವು' ಎಂಬ ಸೂತ್ರವನ್ನು ಕೊ
ಟ್ಟಾನೆ. ವಿವರಿಸಿದರೆ ಅದು ಹೀಗಾಗುತ್ತದೆ :

| ಪ್ರಥಮ ಪುರುಷ | ಮಧ್ಯಮ ಪುರುಷ | ಉತ್ತಮ ಪುರು |
|---|---|---|
| ಅಮ್ (ಏಕ. ವ) ಅವನ್ ರಾಮಂ | ಅಯ್ (ಏಕ. ವ) ನೀನ್ ರಾಮನಯ್ | ಎನ್(ಏಕ.ವ) |
| ಅರ್ (ಬಹು.ವ) ಅವರ್ ರಾಮರ್ | ಇರ್ (ಬಹು. ವ) ನೀಮ್ ರಾಮರಿರ್ | ಎವು(ಬಹು. |
| | | ಆನ್ ರಾಮನೆ |
| | | ಆಮ್ ರಾಮರೆ |

ಹೀಗೆ ಅಮ್, ಅರ್, ಅಯ್, ಇರ್, ಎನ್, ಎವು–
ಇವು ಆಖ್ಯಾತ ಪ್ರತ್ಯಯಗಳು.

**ಉದಾಹರಣೆ :** ಒಂದೂರಿನಲ್ಲಿ ಒಬ್ಬ ರಾಜ, ಅವನಿಗೆ ಒಬ್ಬಳು ಹೆಂಡತಿ. ಅವರಿಗೆ ನಾಲ್ಕು ಜನ ಮಕ್ಕಳು. ಎರಡು ಹೆಣ್ಣು, ಎರಡು ಗಂಡು,

—ಇಲ್ಲಿ ಇದ್ದನು, ಇದ್ದಳು, ಇದ್ದರು ಎಂಬ ಕ್ರಿಯಾಪದ ಬಳಕೆ ಮಾಡಿಲ್ಲ. ಮಾಡಿದ್ದಿದ್ದರೆ ರಚನೆಯಲ್ಲಿ ಏಕತಾನ ಮಿಡಿದು ಕಿವಿಗೆ ಹಿತವಾಗುತ್ತಿರ ಲಿಲ್ಲ. ಈ ರೀತಿ ಕ್ರಿಯಾಪದ ಬಿಟ್ಟು ಹೇಳುವುದು ದ್ರಾವಿಡದ ಜಾಯ ಮಾನ.

ಹಳಗನ್ನಡದಲ್ಲೂ ಇದು ರೂಢಿಯಲ್ಲಿದೆ. ವಡ್ಡಾರಾಧನೆಯ ಯಾವ ಕಥೆಯ ಆರಂಭವೂ ಹೀಗಿರುವುದುಂಟು.

'ಈ ಜಂಬೂ ದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ ಉಜ್ಜೇನಿಯೆಂಬುದು ಪೊಬಿಲದನಾಳ್ವೊಂ ಪ್ರದ್ಯೋತನೆಂಬರಸನಾತನ ಮಹಾದೇವಿ ಜ್ಯೋತಿರ್ಮಾಲೆಯೆಂಬೊಳ್'– (ವೃಷಭಸೇನ ಭಟ್ಟಾರರ ಕಥೆ)

ಇಲ್ಲಿ 'ಇತ್ತು' 'ಇದ್ದ' 'ಇದ್ದಳು' ಎಂಬ ಕ್ರಿಯಾಪದಗಳ ಬಳಕೆ ಇಲ್ಲ. ಅಂತೆಯೇ 'ಅದನಾಳ್ವೊಂ' ಎಂಬಲ್ಲಿ ಆಳ್ವೊಂ ಎಂಬುದು ಕ್ರಿಯಾಪದ ಅಲ್ಲ. 'ಆಳುವವನು' ಎಂಬ ಕೃಲ್ಲಿಂಗ.

ಈ ಕೆಲವು ಉದಾಹರಣೆಗಳಷ್ಟೇ ಅಲ್ಲದೆ ನಾವು ಮಾತನಾಡುವಾಗಲೂ ಹೆಚ್ಚಾಗಿ ಕ್ರಿಯಾಪದಗಳನ್ನು ಬಿಟ್ಟೇ ನುಡಿಯುತ್ತೇವೆ. ಇದು ದ್ರಾವಿಡದ ಹಿರಿಮೆ.

ಇಂಗ್ಲಿಷ್ ಮೊದಲಾದ ಭಾಷೆಗಳಲ್ಲಿ ಕ್ರಿಯಾಪದ ಬಿಟ್ಟು ಭಾಷಾ ಬಳಕೆಯೇ ಇಲ್ಲ.

**ಉದಾ :** There king, one wife, four children–ಈ ರೀತಿ ಬರೆದರೆ ಭಾಷಾ ಮರ್ಯಾದೆ ಹಾಳಾಗುತ್ತದೆ. ಅಲ್ಲಿ ಕ್ರಿಯಾಪದ ಅನಿವಾರ್ಯ.

There was a king, ಎಂದೇ ಹೇಳಬೇಕಾಗುತ್ತದೆ.

(v) **ಪ್ರಯೋಗ :**

ದ್ರಾವಿಡದಲ್ಲಿ ಕರ್ಮಣಿ ಪ್ರಯೋಗ ಇಲ್ಲ; ಕರ್ತರಿ ಮಾತ್ರ. ಸಂಸ್ಕೃತಾದಿಗಳ ಕರ್ತರಿ ಇಲ್ಲ; ಇದ್ದರೂ ತುಂಬಾ ವಿರಳ, ಕರ್ಮಣಿಯೇ ವಿಪುಲ.

**ಉದಾಹರಣೆ :** ನಾನು ತಿಂಡಿ ತಿಂದೆನು (ಕರ್ತರಿ) ಇದು ಸಾಧು
ತಿಂಡಿಯು ನನ್ನಿಂದ ತಿನ್ನಲ್ಪಟ್ಟಿತು (ಕರ್ಮಣಿ)
ಇದು ಅಭಾ

I ate food — ಅಭಾಸ

The food is eaten by me — ಸಾಧು

ಹೀಗೆ ದ್ರಾವಿಡಕ್ಕೆ ಕರ್ತರಿ ಸೊಗಸು, ಸಂಸ್ಕೃತಾದಿಗಳಿಗೆ ಕರ್ಮ ಸೊಗಸು.

(vi) **ಕಾಲವಾಚಕಗಳು :**

ದ್ರಾವಿಡದಲ್ಲಿ ಅದರಲ್ಲೂ ಕನ್ನಡದಲ್ಲಿ ಕಾಲಗಳಿರುವುದು ಎರಡೇ: ಒಂದು ಭೂತ ಮತ್ತೊಂದು ಅಭೂತ. ಸಂಸ್ಕೃತದಂತೆ ಭೂತ, ವರ್ತಮಾನ ಮತ್ತು ಭ ಷ್ಯತ್ ಎಂಬ ಕಾಲತ್ರಯಗಳಿಲ್ಲ. ಈ ಕ್ಷಣದ ಹಿಂದೆ ನಡೆದದ್ದು ಭೂತ, ಈ ಮುಂದೆ ಆಗುವುದು ಅಭೂತ.

**ಉದಾಹರಣೆ :** ರಾಮನು ಪತ್ರ ಬರೆದನು (ಭೂತ)
ರಾಮನು ಪತ್ರ ಬರೆಯುತ್ತಾನೆ (ಅಭೂತ)

ಮೊದಲ ಉದಾಹರಣೆ ನಡೆದುಹೋದ ಘಟನೆಯನ್ನು ತಿಳಿಸುತ್ತದ ಭೂತಕಾಲ ಸೂಚಿಸುತ್ತದೆ. ಆದರೆ ಎರಡನೆಯ ಉದಾಹರಣೆಯ 'ಬರೆಯುತ್ತಾನೆ' ಎಂಬುದು ಈ ಕ್ಷಣದಲ್ಲಿ ಬರೆಯುತ್ತಾನೆ, ಇಲ್ಲವೆ ಒಂದು ವಾರದ ಅನಂತರ ಬರೆಯುತ್ತಾನೆ ಎಂದರ್ಥ ಕೊಡುತ್ತದೆ ಆದ್ದರಿಂದ ನಡೆದುಹೋದ ಘಟನೆ, ನಡೆಯುವ ಘಟನೆ ಎರಡೇ ರೂ ಗಳು ನಮ್ಮ ಮುಂದಿರುವುದರಿಂದ, ಅವನ್ನು ಸೂಚಿಸುವ ಕಾಲವಾಚ ಪ್ರತ್ಯಯಗಳು ಎರಡೇ ಇರುವುದರಿಂದ ದ್ರಾವಿಡದಲ್ಲಿ ಭೂತ, ಅಭೂ ಎರಡೇ ಕಾಲಗಳು.

ಸಂಸ್ಕೃತದ ಪ್ರಭಾವದಿಂದ 'ಬರೆದನು' (ಭೂತ), ಬರೆಯುತ್ತಾ (ವರ್ತಮಾನ), ಬರೆವನು (ಭವಿಷ್ಯತ್) ಎಂದು ವೈಯಾಕರಣಿಗಳ

ಕೃತಕವಾಗಿ ಮೂರು ರೂಪಗಳನ್ನು ಹೇಳುತ್ತಾರೆ. ಆದರೆ ದ್ರಾವಿಡದಲ್ಲಿ ವಾಸ್ತವವಾಗಿ ವರ್ತಮಾನ ಮತ್ತು ಭವಿಷ್ಯತ್ ಕಾಲಗಳಿಗೆ ಪ್ರತ್ಯೇಕ ಕಾಲವಾಚಕ ಪ್ರತ್ಯಯಗಳಿಲ್ಲ.

2.3.2.8. **ನಿಷೇಧಾರ್ಥಕ ಧಾತುರೂಪಗಳು :**

(ಅ) 'ಇಲ್ಲ' ಮತ್ತು 'ಅಲ್ಲ' ಕನ್ನಡದ ನಿಷೇಧಾರ್ಥಕ ಪ್ರತ್ಯಯಗಳು. 'ಇಲ್ಲ' ಎಂಬುದು ವಸ್ತುವಿನ ಅಸ್ತಿತ್ವವನ್ನು ನಿರಾಕರಿಸಿದರೆ, 'ಅಲ್ಲ' ಎಂಬುದು ವಸ್ತುವಿನ ಗುಣ, ಶೀಲ, ಸ್ವಭಾವಗಳನ್ನು ಅಲ್ಲಗಳೆಯುತ್ತದೆ.

**ಉದಾಹರಣೆ :** ಇಲ್ಲಿ ರಾಮನಿಲ್ಲ
ರಾಮನು ಕ್ರೂರಿಯಲ್ಲ

ಮೊದಲನೆಯದು ವ್ಯಕ್ತಿಯ ಹಾಜರಿಯನ್ನು ನಿರಾಕರಿಸಿದರೆ, ಎರಡನೆಯದು ವ್ಯಕ್ತಿಯ ಗುಣವನ್ನು ತಿರಸ್ಕರಿಸುತ್ತದೆ.

(ಆ) ಇದೇ ರೀತಿ 'ಇಲ್ಲ' ಎಂಬುದು ವಸ್ತುವಿನ ಅಸ್ತಿತ್ವವನ್ನು ನಿರಾಕರಿಸಿದರೆ, 'ಅಲ್ಲ' ಎಂಬುದು ಒಂದರ ಅಸ್ತಿತ್ವ ನಿರಾಕರಿಸಿದರೂ ಮತ್ತೊಂದರ ಅಸ್ತಿತ್ವವನ್ನು ಸ್ಥಾಪಿಸುತ್ತದೆ.

**ಉದಾಹರಣೆ :** ಅವನು ರಾಮನಲ್ಲ

ಇಲ್ಲಿ 'ರಾಮನಲ್ಲ' ಅಂದರೆ ಅವನು ಬೇರೊಬ್ಬನಾಗಿದ್ದಾನೆ—ಭೀಮನೊ, ಕಾಮನೊ ಆಗಿದ್ದಾನೆ – ಎಂಬುದರ ಸೂಚನೆ ಕೊಡುತ್ತದೆ. ಆ ಕಾರಣ 'ಅಲ್ಲ' ಎಂಬ ನಿಷೇಧಾರ್ಥಕ ಪ್ರತ್ಯಯ ಬೇರೊಂದರ ಅಸ್ತಿತ್ವವನ್ನು ಅಪ್ರತ್ಯಕ್ಷವಾಗಿ ಅಪರೋಕ್ಷವಾಗಿ ಸ್ಥಾಪನೆ ಮಾಡುತ್ತದೆ.
ಇದು ದ್ರಾವಿಡದ ವೈಶಿಷ್ಟ್ಯ.

2.3.2.9. **ವಾಕ್ಯ ರಚನೆ :** ಕರ್ತೃ ಕರ್ಮ ಕ್ರಿಯೆ
–ಇದು ದ್ರಾವಿಡ ರಚನಾಕ್ರಮ. ಆದರೆ ಸಂಸ್ಕೃತಾದಿಗಳಲ್ಲಿ ಕರ್ತೃ ಕ್ರಿಯೆ ಕರ್ಮ ಉಂಟು.

| | | | |
|---|---|---|---|
| **ಉದಾಹರಣೆ :** | ಕರ್ತೃ | ಕರ್ಮ | ಕ್ರಿಯೆ |
| | ರಾಮನು | ರಾವಣನನ್ನು | ಕೊಂದನು |
| | ಕರ್ತೃ | ಕ್ರಿಯೆ | ಕರ್ಮ |
| | Rama | Killed | Ravana |

## III ಕರ್ನಾಟಕ : ನಾಡು ಮತ್ತು ನುಡಿ

### 3.1.0. ಕನ್ನಡ ನಾಡು :

ಸ್ವತಂತ್ರ ಭಾರತದ ಗಣರಾಜ್ಯ ಘೋಷಣೆಯ ನಂತರ ಭಾಷಾವಾರು ಪ್ರಾಂತ ರಚನೆ ಆಯಿತು. ಅಂದು ಅಸ್ತಿತ್ವಕ್ಕೆ ಬಂದ, ವಿಸ್ತೀರ್ಣದಲ್ಲಿ ಆರನೆಯದಾದ ರಾಜ್ಯ–ಕರ್ನಾಟಕ. ಮೊದಲು ಇದನ್ನು 'ವಿಶಾಲ ಮೈಸೂರು' ಎಂದು ಕರೆದರು. ಅನಂತರ ೧೯೭೩ ನವೆಂಬರ್ ೧ ರಂದು 'ಕರ್ನಾಟಕ' ಎಂದು ಪುನರ್ನಾಮಕರಣ ಮಾಡಲಾಯಿತು. ಪ್ರಾಚೀನ ಯುಗಗಳಲ್ಲಿ ಇದನ್ನು 'ಕುಂತಳ' ಎಂತಲೂ 'ಮಹಾರಾಷ್ಟ್ರ' ಎಂತಲೂ ಸಂಬೋಧಿಸುತ್ತಿದ್ದುದುಂಟು. ಆದರೆ 'ಕರ್ನಾಟಕ' ಅಥವಾ 'ಕರ್ಣಾಟಕ' ಎಂಬುದೇ ಅನಾದಿ ಕಾಲದಿಂದಲೂ ಉಳಿದು ಬೆಳೆದು ಬಂದ ಹೆಸರು. ಕ್ರಿ.ಪೂ. ೪ನೆಯ ಶತಮಾನದ ವ್ಯಾಸರ ಮಹಾಭಾರತದ ಭೀಷ್ಮ ಪರ್ವದಲ್ಲಿ, ಕ್ರಿ.ಪೂ. ೧ನೆಯ ಶತಮಾನದ ಗುಣಾಢ್ಯನ ಬೃಹತ್ಕಥೆಯಲ್ಲಿ, ಕ್ರಿ.ಶ. ೫ನೆಯ ಶತಮಾನದ ಶೂದ್ರಕನ ಮೃಚ್ಛಕಟಿಕ ಪ್ರಕರಣದಲ್ಲಿ, ಅದೇ ಯುಗದ ವಿಷ್ಣು ಧರ್ಮೋತ್ತರ ಪುರಾಣದಲ್ಲಿ, ಕ್ರಿ.ಶ. ೬ನೆಯ ಶತಮಾನದ ಬೃಹತ್ಸಂಹಿತೆಯಲ್ಲಿ 'ಕರ್ನಾಟಕ' ದೇಶವಾಚಿಯಾಗಿ ಬಳಕೆಯಾಗಿದೆ. ಈ ಸಂಸ್ಕೃತ ಗ್ರಂಥಗಳಲ್ಲದೆ, ನಾಗವರ್ಮನ 'ಕರ್ನಾಟಕ ಕಾದಂಬರಿ' ಕವಿಮಲ್ಲನ 'ಮನ್ಮಥ ವಿಜಯ' ಮೊದಲಾದ ಕನ್ನಡ ಗ್ರಂಥಗಳಲ್ಲಿ ಭಾಷಾವಾಚಿಯಾಗಿ ಸಿಗುತ್ತದೆ.

**3.1.1.** ಹೀಗೆ ಪ್ರಯೋಗಗೊಂಡ 'ಕರ್ನಾಟಕ' ಶಬ್ದದ ನಿಷ್ಪತ್ತಿಯ ಬಗೆಗೆ ಸಾಕಷ್ಟು ಚರ್ಚೆ ನಡೆದಿದೆ. 'ಕರ್ನಾಟಕ' ಎಂಬುದು ಕನ್ನಡನಾಡಿನ ಅಥವಾ ಕನ್ನಡ ಭಾಷೆಯ ಹೆಸರು. ಇದನ್ನು ಕರ್ನಾಟ, ಕರ್ನಾಟಕ ಎಂದೆಲ್ಲ ಕರೆಯುತ್ತಾರೆ. 'ಕರ್ಣಯೋಃ ಅಟತಿ ಇತಿ ಕರ್ಣಾಟಃ' ಎಂದು ವೆಂಕಟಾಧ್ವರಿಯು ತನ್ನ ಗುಣಾದರ್ಶದಲ್ಲಿ ಅರ್ಥೈಸಿದ್ದಾನೆ. ಅಂದರೆ ಕನ್ನಡಿಗರ ಕೀರ್ತಿ ಕನ್ನಡೇತರರ ಕಿವಿಗಳ ಮೇಲೆ ಬಡಿಯುತ್ತಿದ್ದುದರಿಂದ ಕರ್ನಾಟ ಅನ್ನಿಸಿಕೊಂಡಿತಂತೆ! ಆದರೆ ಅದು ಸಂಸ್ಕೃತಕೃತ (Sanskritised form) ಕನ್ನಡ ಶಬ್ದ ಅಲ್ಲ. ಕರ್ನಾಡು ಎಂಬ ದೇಶ್ಯಶಬ್ದ ಸಂಸ್ಕೃ

ತಜ್ಞರ ಬಾಯಲ್ಲಿ 'ಕರ್ಣಾಟ' ಎಂದಾಗಿದೆ. ಅದೇ ಅರ್ಥದಲ್ಲಿದೆ ಕಾಲ್ಡ್‌ವೆಲ್ ಮೊದಲಾದವರು ಕೊಡುವ ಕರ್+ನಾಟ್+ಅಗವ್=(ಕಪ್ಪುನಾಡ ಒಳ ಪ್ರದೇಶ) ಎಂಬ ನಿಷ್ಪತ್ತಿ. ಕರ್ನಾಟಕದ ಬಹುಭಾಗ ಕಪ್ಪು ಮಣ್ಣಿನ (ಎರೆಮಣ್ಣಿನ) ಭೂಮಿಯಾದ್ದರಿಂದ ಆ ಭೂಗುಣವನ್ನು ಆಧರಿಸಿ 'ಕರ್‌ನಾಡಗವ್> ಕರ್ನಾಟಕವ್> ಕರ್ನಾಟಕ ಆಗಿರಬಹುದೆಂಬ ಊಹನೆ ಅವರದು. ಆದರೆ ಗೋವಿಂದ ಪೈಯವರು ಕರು (ದೊಡ್ಡ)+ನಾಡು (ದೇಶ) = ಕರ್ನಾಡು> ಕನ್ನಾಡು> ಕನ್ನಾಡ> ಆಗಿ ಕರ್ನಾ (ರ್ಣಾ)ಟ ಎಂದು ಸಂಸ್ಕೃತರೂಪ ತಳೆದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಕಮ್ಮಿತ್ತು+ನಾಡು (ಪರಿಮಳಪೂರಿತನಾಡು) = ಕಂನಾಡು> ಕನ್ನಾಡು> ಕನ್ನಡು> ಕನ್ನಡ ಆಗಿರಬಹುದು ಎಂದು ರಾ. ನರಸಿಂಹಾಚಾರ್ಯರೂ, 'ರೂಪವನ್ನು ಮೂಡಿಸುವುದು ಕನ್ನಡಿ, ಭಾವಗಳನ್ನೊಡಮೂಡಿಸುವುದು ಕನ್ನಡ' ಎಂದು ದ.ರಾ. ಬೇಂದ್ರೆ ಮತ್ತು ಬೆಟಗೇರಿ ಕೃಷ್ಣಶರ್ಮರೂ ಭಾವನಾತ್ಮಕ ನಿಷ್ಪತ್ತಿ ಹುಡುಕಿದರೆ, ಶಂ. ಬಾ. ಜೋಶಿಯವರು ಕಳ್+ಅರು (ಹಾಲು ಉತ್ಪಾದಕರು) ಕಳ್ಳರು ಅಂದರೆ ಪಶುಪಾಲನೆಯಿಂದ ಬದುಕು ಮಾಡುತ್ತಿದ್ದ ಮೂಲನಿವಾಸಿಗಳಾದ ಕಳ್ವರ ಅಥವಾ ಕಣ್ವರ ಅಥವಾ ಕನ್ನರ ಅಥವಾ ಕಳಭ್ರರನಾಡು ಎಂದು ಜನಾಂಗವಾಚಿ ಶಬ್ದವಾಗಿ ಗುರುತಿಸಿದರು. ಹತ್ತಂಗಡಿ ನಾರಾಯಣರಾಯರು ಕರು (ಎತ್ತರವಾದ)+ನಾಡು (ಪ್ರದೇಶ) = ಕರುನಾಡು ಅಂದರೆ ಎತ್ತರವಾದ ಭೂಪ್ರದೇಶ ಎಂಬರ್ಥದಿಂದ ಪ್ರದೇಶವಾಚಿಯಾಗಿ ನಿಷ್ಪನ್ನಗೊಂಡಿದೆ ಎಂದು ಗುರುತಿಸಿದರು. ಇದು ಸಮಂಜಸವಾದ ಆಲೋಚನೆ ಅನ್ನಿಸುತ್ತದೆ. ಕರುನಾಡು> ಕರ್ನಾಡು> ಕರ್ನಾಡ> ಕರ್ನಡ> ಕನ್ನಡ ಆಗಿರಬಹುದು. ಕರುಮಾಡ ಅಂದರೆ ಎತ್ತರದ ಮನೆ (ಉಪ್ಪರಿಗೆ). ಅದೇ ರೀತಿ ಕರುನಾಡು ಅರ್ಥಾತ್ ಉನ್ನತ ಪ್ರದೇಶ, ಕರ್ನಾಟಕ ಅಥವಾ ಕನ್ನಡನಾಡು ಸಮುದ್ರ ಮಟ್ಟಕ್ಕೆ ೧೫೦೦ ಅಡಿ ಎತ್ತರದಲ್ಲಿದೆ. ಇದನ್ನು ದಕ್ಷಿಣ ಪ್ರಸ್ಥಭೂಮಿ ಎಂದು ಕರೆಯುತ್ತಾರೆ. ಕನ್ನಡಿಗರು ಎತ್ತರದ ಪ್ರದೇಶದವರು. ಪಲ್ಲವರು, ಪಳ್ಳವರು ಅಂದರೆ ಹಳ್ಳದವರು ಅರ್ಥಾತ್ ತಗ್ಗಿನ ಪ್ರದೇಶದವರು. ಆದ್ದರಿಂದ ಎತ್ತರದ ಪ್ರದೇಶದವರು ಎಂಬರ್ಥದಲ್ಲಿ ಗುರುತಿಸಲಾಗಿದೆ. ಈಗಲೂ ಮೂಲೆ ಮನೆಯವರು, ಬೀದಿಮನೆಯವರು ಇತ್ಯಾದಿ ಸಂಬೋಧನೆಗಳು ರೂಢಿಯಲ್ಲಿವೆ. ಅಂದಿನ ಮೂಲೆ ಮನೆ ಇಂದು ಊರಮಧ್ಯದ ಮನೆಯಾದರೂ ಅದನ್ನು ಮೂಲೆಮನೆ ಎಂದೇ ಕರೆಯುವುದು ರೂಢಿ. ಹಾಗೆ ಪಲ್ಲವರು ತಗ್ಗಿನವರು ಕರುನಾಡವರು ಎತ್ತರದ ಪ್ರದೇಶದವರು. ಈ ದೇಶವಾಚಿ ವಿವಕ್ಷೆ ಅರ್ಥಪೂರ್ಣವಾದದ್ದೆಂದು ಹೇಳಬಹುದು. ಕಾಲಗತಿಯಲ್ಲಿ ಕರ್ನಾಡ> ಕರ್ಣಾಟ ಎಂದು ಸಂಸ್ಕೃತೀಕೃತ ಆಯಿತು. ಅದೇ ಕರ್ಣಾಟ ಜನಬಳಕೆಯಲ್ಲಿ ಕರ್ನಾಟಕ ಆಗಿದೆ. ಒಟ್ಟಿನಲ್ಲಿ, ಕರ್ನಾಟಕ ಒಂದು ಪ್ರದೇಶವಾಚಿ ಶಬ್ದ.

ಈ ಉನ್ನತ ಪ್ರದೇಶದ ಜನರೇ ಕರುನಾಡಿನವರು ಅರ್ಥಾತ್ ಕನ್ನಡಿಗರು. ಈ ಪದವನ್ನು ಏಕವಚನ, ಬಹುವಚನ ರೂಪಗಳಲ್ಲಿ ಕ್ರಿ.ಶ. ೨ನೆಯ ಶತಮಾನದ ತಮಿಳಿನ 'ಶಿಲಪ್ಪದಿಗಾರಮ್', ೧೧ನೆಯ ಶತಮಾನದ 'ವೀರಚೋಳಿಯಂ', ಮತ್ತು ೮ನೆಯ ಶತಮಾನದ ಪಾಂಡ್ಯರಾಜನ 'ವೆಳ್ವಿಕುಡಿ ತಾಮ್ರಶಾಸನ'—ಇವುಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಶಿಲಪ್ಪದಿಗಾರಂನಲ್ಲಿ ಶೇಂಗುಟ್ಟುವನ್ ಎಂಬ ಚೇರ ರಾಜನು ಉತ್ತರ ಭಾರತದ ಕಡೆಗೆ ಹೋಗುವಾಗ ನೀಲಗಿರಿಯಲ್ಲಿ ತಂಗಿದ್ದಾಗ 'ಕರುನಾಡವರ್' ಬಂದು ನೃತ್ಯ ಪ್ರದರ್ಶನವಿತ್ತು ಹರ್ಷಗೊಳಿಸಿದರಂತೆ. ಈ ಬಗೆಯ ಬಹುವಚನರೂಪಿ 'ಕನ್ನಾಡರ್' ಶಬ್ದವು ಕರುನಾಡವರು ಎಂಬರ್ಥದಲ್ಲಿ ತಮಿಳಿನ ವ್ಯಾಕರಣ ಗ್ರಂಥವಾದ 'ವೀರಚೋಳಿಯಂ'ನಲ್ಲಿ ಕಾಣಸಿಗುತ್ತದೆ. ಮತ್ತೆ ವೆಳ್ವಿಕುಡಿ ತಾಮ್ರಶಾಸನದಲ್ಲಿ 'ಕರುನಾಡಗನ್' ಎಂಬ ಏಕವಚನ ಶಬ್ದವು ಪ್ರಯೋಗಗೊಂಡಿದೆ. ಹೀಗೆ ಕರುನಾಡಿನ ಜನರನ್ನು ಕರುನಾಡವರು ಎಂದು ಗುರುತಿಸಿ ಕರೆದಿರುವುದುಂಟು. ಅದೇರೀತಿ ಕರುನಾಡವರು ಆಡುವ ಭಾಷೆ ಕನ್ನಡ ಭಾಷೆ.

ಒಟ್ಟಿನಲ್ಲಿ, ಎತ್ತರದ ನೆಲ ಕರುನಾಡು, ಅಲ್ಲಿನ ಜನ ಕರುನಾಡವರು, ಅವರಾಡುವ ಭಾಷೆ ಕನ್ನಡ !

## 3.2.0. ಕನ್ನಡ ನುಡಿ :

ಕನ್ನಡ ಇಂದು ಕರ್ನಾಟಕದ ರಾಜ್ಯಭಾಷೆ (State Language), ರಾಜಭಾಷೆ (Official Language) ಕೂಡ : ನಾಲ್ಕು ಕೋಟಿ ಕನ್ನಡಿಗರ ತಾಯ್ನುಡಿ. ಭರತ ಖಂಡದ ಪ್ರಬುದ್ಧ ಭಾಷೆಗಳಂತೆ ಇದೂ ಸಹ ತನ್ನದೇ ಆದ ವ್ಯಕ್ತಿತ್ವ ಮತ್ತು ಅಸ್ತಿತ್ವಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದಿರುವ ಶ್ರೀಮಂತಭಾಷೆ. ಇಂತಹ ಸಮೃದ್ಧ ಭಾಷೆಯ ಪ್ರಾಚೀನತೆಯ ಬಗೆಗೆ ವಿದ್ವಾಂಸರು ಈಗಾಗಲೆ ವಿಚಾರಮಾಡಿ ಕ್ರಿ.ಪೂ. ಸುಮಾರು ಮೂರುನೂರು ವರ್ಷಗಳಷ್ಟು ಹಿಂದೆ ಹೋಗಬಹುದು ಎಂದಿದ್ದಾರೆ. ಇಂತು ನಿರ್ಧರಿಸಲು ವಿದ್ವಾಂಸರುಗಳಿಗಿರುವ ಮುಖ್ಯ ಆಧಾರಗಳು ಐದು : (i) ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬಂದಿರುವ 'ಇಸಿಲ' ಶಬ್ದ, (ii) ಶಾತವಾಹನರ ಶಾಸನ ಮತ್ತು ನಾಣ್ಯಗಳ ಮೇಲಿರುವ 'ಪುಲುಮಾಯಿ' 'ವಿಲಿವಾಯಕುರ' ಎಂಬ ಪದಗಳು, (iii) ಆಕ್ಸರಿಂಕಸ್ ಪಪ್ಪೈರಿ (ಗ್ರೀಕ್ ಭಾಷೆಯ ಕಿರು ಪ್ರಹಸನ)ಯಲ್ಲಿ ಇವೆಯೆಂದು ಹೇಳುವ ಕೆಲವು ಕನ್ನಡ ಮಾತುಗಳು, (iv) ಹಾಲರಾಜನ ಗಾಥಾ ಸಪ್ತಶತಿಯಲ್ಲಿರುವ ಕೆಲವು ಕನ್ನಡ ಶಬ್ದಗಳು, (v) ಗ್ರೀಕ್ ಭೂಗೋಳ ಶಾಸ್ತ್ರಜ್ಞ ಟಾಲೆಮಿಯು ಹೆಸರಿಸಿರುವ ಕೆಲವು ಕನ್ನಡ ನಾಡಿನ ಸ್ಥಳ ನಾಮಗಳು, ಇವುಗಳನ್ನು ಕುರಿತ ಪರಿಚಯಾತ್ಮಕ ಪ್ರವರ ಈ ರೀತಿ ಇದೆ.

(i) ಕ್ರಿ.ಪೂ. ೩ನೆಯ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ' ಎಂಬ ಶಬ್ದ ಬರುತ್ತದೆ. ಇದರರ್ಥ ಕೋಟೆಯಿಂದಾವೃತವಾದ ನಗರ ಎಂದು. ಇದು ಶುದ್ಧ ದ್ರಾವಿಡಪದ; ಅದರಲ್ಲೂ ಕನ್ನಡದ ಸ್ವಚ್ಛರೂಪ. ಪ್ರಾಚೀನ ಪಾಳಿ ಭಾಷೆಯ ಈ ಶಾಸನದಲ್ಲಿ ಕನ್ನಡಪದವೊಂದು ಸ್ಥಾನ ಪಡೆದಿರಬೇಕಾದರೆ ಕನ್ನಡ ಆ ಕಾಲಕ್ಕಾಗಲೆ ಪ್ರಚಲಿತ ಪ್ರಾದೇಶಿಕ ಭಾಷೆಯಾಗಿದ್ದಿರಬೇಕು. ಕ್ರಿ.ಪೂ. ಸುಮಾರು ೫ನೆಯ ಶತಮಾನದ ಹೊತ್ತಿಗಾಗಲೆ ಮೂಲದ್ರಾವಿಡದಿಂದ ಬೇರ್ಪಟ್ಟು ಸ್ವತಂತ್ರ ಅಸ್ತಿತ್ವ ಸ್ಥಾಪನೆ ಮಾಡಿಕೊಂಡು ಸಂಸ್ಕೃತ ಪ್ರಾಕೃತ (ಪಾಳಿ)ಗಳ ಸಹಯೋಗದೊಂದಿಗೆ ಪುರೋಭಿವೃದ್ಧಿ ಪಡೆಯುತ್ತಾ ಬಂದಿರಬೇಕು ಕನ್ನಡ. ಕ್ರಿ.ಪೂ. ೩ನೇ ಶತಮಾನದ ಹೊತ್ತಿಗೆ ತನ್ನ ಶಬ್ದಕೋಶದ ಪದವನ್ನು ಅನ್ಯಭಾಷೆಗೆ ಎರವಲು ಕೊಡುವಷ್ಟು ಶ್ರೀಮಂತವಾಗಿರಬೇಕಾದರೆ ಅದಕ್ಕೆ ನೂರು ಇನ್ನೂರು ವರ್ಷಗಳ ಹಿಂದಿನಿಂದಲೂ ಕನ್ನಡ ಭಾಷೆಯು ನಿರಂತರ ದುಡಿಮೆ ಹೋರಾಟಗಳಿದ್ದುವೆಂದು ಊಹಿಸಬಹುದು. ಆ ಕಾರಣ ಕನ್ನಡದ ಪ್ರಾಚೀನತೆ ಕ್ರಿ.ಪೂ. ೫ನೆಯ ಶತಮಾನದಷ್ಟು ಹಿಂದಿನದು ಎಂದು ಹೇಳಲು ಯಾವ ಅಡ್ಡಿಯೂ ಇರಲಾರದು[10].

(ii) ಕ್ರಿ.ಪೂ. ೨–೧ನೆಯ ಶತಮಾನಗಳ ಶಾತವಾಹನರ ಶಾಸನ ಹಾಗೂ ನಾಣ್ಯಗಳ ಮೇಲೆ 'ಪಲಿವಾಯಕುರ' ಎಂಬ ಶಬ್ದವಿದೆ. ಅದರರ್ಥ ಪಲಿವಾಯ = ಕುದುರೆ, ಕುರ = ಪಟ್ಟಣ ಎಂಬುದಾಗಿದೆ ಇದು ಕನ್ನಡ ಶಬ್ದವೆಂದು ವಿದ್ವಾಂಸರು ಹೇಳುತ್ತಾರೆ. ಮತ್ತೆ ಕೆಲವರು 'ಪುಲುಮಾಯಿ, ವಿವಪುಳ, ಪದಗಳನ್ನು ತೆಗದು ತೋರಿಸಿ, ಇವೂ ಶಾತ

---

10 "ಇಸಿಲ ಎಂಬ ಬ್ರಹ್ಮಗಿರಿ ಶಾಸನದ ಊರು ಈಗ ಉಳಿದಿಲ್ಲ, ನಿಜ. ಆದರೆ ಆ ಹೆಸರುಳ್ಳ ಅನೇಕ ಊರುಗಳು ಕರ್ನಾಟಕದಲ್ಲಿವೆ. 'ಎಯಿಲ್ ನಾಟ್ಟು' ಎಂಬ ಹೆಸರು ಅನೇಕ ತಮಿಳು ಶಾಸನಗಳಲ್ಲಿ ದೊರಕುತ್ತದೆ. (ನಾಟ್ಟು = ನಾಡು). ಶಿವಮೊಗ್ಗ ಜಿಲ್ಲೆಯ ಕ್ರಿ.ಶ. ೧೧೫೫ರ ಶಾಸನದಲ್ಲಿ ಇಸಲಾಪುರದ ಹೆಸರಿದೆ. ಎಸಲಾಪುರ, ಯೆಸ್ಳೂರು, ಎಸಳೂರು ಮುಂತಾದ ಊರುಗಳ ಮೂಲದಲ್ಲೆಲ್ಲ 'ಇಸಿಲ'ವೇ ಇದೆ. ಇವುಗಳಲ್ಲಿ ಪದಾರಂಭದ 'ಎ' ಮೂಲವೇ 'ಇ' ಮೂಲವೇ ? 'ಬಾಣ ಪ್ರಯೋಗ ಮಾಡು' ಎಂಬರ್ಥದ ಧಾತು 'ಎಯ್' ಆಗಿರುವುದರಿಂದ 'ಎಯಿಲ' ಎಂಬುದೇ ಮೊದಲಿದ್ದು ಅಮೇಲೆ 'ಇಸಿಲ' ಆಗಿರಬಹುದು. ಅಶೋಕನ ಕಾಲ ಕ್ರಿ.ಪೂ. ೨೭೨–೨೩೨. ಬ್ರಹ್ಮಗಿರಿ ಶಾಸನದ 'ಇಸಿಲ' ಪದವೂ ಆ ಅವಧಿಗೆ ಸೇರುತ್ತದೆ. ಮೇಲಿನ ವಾದವನ್ನು ಒಪ್ಪಿಕೊಳ್ಳುವುದಾದರೆ ಕನ್ನಡ ಭಾಷೆಯ ಪ್ರಾಚೀನತೆ ಕ್ರಿ. ಶ. ೫ನೇ ಶತಮಾನದಿಂದ ಕ್ರಿ.ಪೂ. ೩ನೇ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ."

ಡಾ॥ ಎಂ. ಚಿದಾನಂದಮೂರ್ತಿ

ವಾಹನರ ಕಾಲದ ಶಾಸನಗಳಲ್ಲಿ ಕಾಣಸಿಗುವ ಕನ್ನಡ ಶಬ್ದಗಳು ಎಂದಿದ್ದಾರೆ. ಈ ಪದಗಳ ನಿಷ್ಪತ್ತಿಯನ್ನು ಒಪ್ಪದವರೂ ಇದ್ದಾರೆ. ಆದರೂ ಕ್ರಿ.ಪೂ.ದಲ್ಲೇ ಕನ್ನಡದ ಹೆಜ್ಜೆ ಗುರುತುಗಳು ಸಿಕ್ಕಿರುವುದು ಸತ್ಯ. ಆದ್ದರಿಂದ ಕನ್ನಡ ಅಷ್ಟು ಪ್ರಾಚೀನ ಎಂಬುದರಲ್ಲಿ ಸಂದೇಹವಿಲ್ಲ.

(iii) ೧೮೯೯ರಲ್ಲಿ ಈಜಿಪ್ಟಿನ ಆಕ್ಸರಿಂಕಸ್ ಎಂಬೆಡೆಯಲ್ಲಿ ಒಂದು ಗ್ರೀಕ್ ಪ್ರಹಸನ ಸಿಕ್ಕಿತು. ಅದೇ 'ಆಕ್ಸರಿಂಕಸ್ ಪಪೈರಿ' (The Oxrhyncus Papyri.) ಅದರಲ್ಲಿ ಮಲ್ಪೆಯ ರಾಜನು ಗ್ರೀಸ್ ದೇಸದಿಂದ ಓರ್ವ ಗ್ರೀಕ್ ಕನ್ಯೆಯನ್ನು ಕರೆತರುತ್ತಾನೆ. ಅವಳಿಗೆ ಅನ್ಯದೇಶದ ಅನ್ಯಭಾಷೆ ಬರುವುದಿಲ್ಲ. ಆದರೆ ಇಲ್ಲಿಗೆ ಬಂದಮೇಲೆ ಈ ದೇಶ ಭಾಷೆ ಕಲಿಯು ವುದು ಅನಿವಾರ್ಯವಾಗುತ್ತದೆ, ಕಲಿಯುತ್ತಾಳೆ. ಆ ಕಲಿಕೆಯ ವೇಳೆ ಯಲ್ಲಿ ಕೆಲವು ಉಚ್ಚರಣೆಗಳು ವಿಚಿತ್ರವಾಗಿವೆ. ಗ್ರೀಕೇತರ ಸಂಭಾಷಣಾ ರೂಪಿಗಳಾದ ಅವು ಕನ್ನಡ ಪದಗಳೆಂದು ಕೆಲವರು, ಅಲ್ಲವೆಂದು ಮತ್ತೆ ಕೆಲವರು ಅಭಿಪ್ರಾಯಪಡುತ್ತಾರೆ. ಅಲ್ಲಿನ ಕೆಲವು ಮಾತುಗಳು ಹೀಗಿವೆ :

Arminthai = ಅರ್ ಮಿಂದ್ಯೆ = (ಹೊಳೆಯಲ್ಲಿ ಮಿಂದೆಯಾ ?)

Echouci = ಏ ಕೂಸೆ.

Apuleuka Sar = ಆ ಪೊಳೆಕ ಸಾರ್ = (ಆ ಹೊಳೆಗೆ ನಡೆ)

Malpinakou Roukoku Koubi Karakondu Ba = ಮಲ್ಪಿ ನಾಯಕ ರುಕು ಕೂಬಿ ಕರಕೊಂಡು ಬಾ = (ಮಲ್ಪಿನಾಯಕರಿಗೆ ಕೂಗಿ ಕರಕೊಂಡು ಬಾ) ಇತ್ಯಾದಿ.

ಇವನ್ನು ಮೂಲದಿಂದಲೇ ಓದಿ ಕನ್ನಡದ ಶಬ್ದಗಳೆಂದು ಗೋವಿಂದಪೈ ಮೊದಲಾದ ವಿದ್ವಾಂಸರು ಗುರುತಿಸಿದ್ದಾರೆ. ಬಹುಶಃ ನಮ್ಮ ಉಡುಪಿ ಬಳಿಯ ಮಲ್ಪೆರಾಜ ತನ್ನ ಗ್ರೀಕ್ ಪ್ರೇಯಸಿಗೆ ಕನ್ನಡ ಕಲಿಸಿದ್ದಿರ ಬಹುದು ! ಅಂತು ಗ್ರೀಕ್ ಪ್ರಹಸನದಲ್ಲಿ ಕನ್ನಡದ ನುಡಿಗಳಿವೆ. ಅದರ ಕಾಲ ಕ್ರಿ ಪೂ. ೨ನೇ ಶತಮಾನದವರೆಗೆ ಹಿಂದೆ ಹೋಗುತ್ತದೆ.

(iv) ಗಾಥಾ ಸಪ್ತಶತಿ ಕ್ರಿ.ಶ. ೧ನೆಯ ಶತಮಾನದಲ್ಲಿ ಹುಟ್ಟಿದ ಪ್ರಾಕೃತ ಗ್ರಂಥ. ಅದರಲ್ಲಿ ೭೦೦ ಶೃಂಗಾರ ಪೂರ್ಣ ಬಿಡಿಬಿಡಿ ಮುಕ್ತಕಗಳಿವೆ, ಶಾತವಾಹನರ ರಾಜ ಹಾಲ ಅದರ ಕರ್ತೃ. ಅದರಲ್ಲಿ 'ಕನ್ನಡದ ಮಾತು

ಗಳಿವೆ ಎಂದು ಮೊತ್ತ ಮೊದಲು ಘೋಷಿಸಿ ಕನ್ನಡಿಗರ ಕುತೂಹಲವನ್ನು ಕೆರಳಿಸಿದವರು ರಾಷ್ಟ್ರಕವಿ ಗೋವಿಂದ ಪೈ[11]. ಶ್ರೀಯುತರ ಹೇಳಿಕೆ ಸಾಹಿತ್ಯ ರಸಿಕರಿಗೆ ಹೊಸ ಹುರುಪು ತಂದರೂ, ಸಂಶೋಧಕರಿಗೆ ಸಮಾಧಾನ ತರಲಿಲ್ಲ. ಕಾರಣ ಅವರ ಹೇಳಿಕೆ ಸತ್ಯಕ್ಕೆ ದೂರವಾದದ್ದು. ಅದು ತಮ್ಮ ಆತುರದ ನಿರ್ಧಾರವೆಂದು ಅರಿತಿದ್ದರಿಂದಲೋ ಏನೋ ಶ್ರೀಯುತರು ಉದಯಭಾರತ ಪತ್ರಿಕೆಯಲ್ಲಿ ಪ್ರಕಟವಾದ ತಮ್ಮ ಸುವಿಸ್ತಾರ ಲೇಖನದಿಂದ "ಗಾಥಾಸಪ್ತಶತಿಯಲ್ಲಿ ಕನ್ನಡದ ಮಾತುಗಳು" ಎಂಬ ಭಾಗವನ್ನು ತೆಗೆದುಹಾಕಿ, ಉಳಿದ ಭಾಗವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರು[12]. ತಮ್ಮ ವಾದದಲ್ಲಿ ತಿರುಳಿದ್ದಿದ್ದರೆ ಕನ್ನಡದ ವಿದ್ವನ್ಮಣಿ ಗೋವಿಂದ ಪೈ ಸದ್ದು ಗದ್ದಲವಿಲ್ಲದೆ ತಮ್ಮ ಹೇಳಿಕೆಯನ್ನು ವಾಪಸ್ ತೆಗೆದುಕೊಳ್ಳುತ್ತಿರಲಿಲ್ಲ.

ಪೈ ಅವರು ಮೊದಲು ಕೊಟ್ಟ ಪದಗಳು ಇವು: ಪೊಟ್ಟ (ಹೊಟ್ಟೆ) ತುಪ್ಪ (ಘೃತ), ಪಿಟ್ಟೆ (ಪೆಟ್ಟು, ಹೊಡೆ, ಬಡಿ) ತೀರ್ ಇ (ತೀರು to be able), ಇವು ಕನ್ನಡ ಪದಗಳೆಂತಲೂ ಇವನ್ನು ಪ್ರಾಕೃತ ಗ್ರಂಥ 'ಗಾಥಾ ಸಪ್ತಶತಿ' ಎರವಲಾಗಿ ಪಡೆದಿದೆ ಎಂತಲೂ ಅಭಿಪ್ರಾಯಪಟ್ಟರು. ಆದರೆ ಇವು ಕನ್ನಡ ಪದಗಳಲ್ಲ. ಸಂಸ್ಕೃತದ ಪೃಷ್ಠ ಪ್ರಾಕೃತದಲ್ಲಿ ಪೊಟ್ಟ ಆಗುತ್ತದೆ. ಸಂಸ್ಕೃತದ ಪೃಷ್ಠದ ಅರ್ಥ ಹಿಂಭಾಗ ಅಷ್ಟೇ ಅಲ್ಲ ಮುಂಭಾಗವೂ ಹೌದು. ಆದ್ದರಿಂದ ಪೃಷ್ಠದ ಪ್ರಾಕೃತ ರೂಪ ಪೊಟ್ಟ ಆಗಿದೆಯೇ ಹೊರತು ಕನ್ನಡದ ಹೊಟ್ಟೆ ಅಲ್ಲ. 'ತುಪ್ಪ' ಕನ್ನಡವೂ ಅಲ್ಲ, ಸಂಸ್ಕೃತವೂ ಅಲ್ಲ. ಮರಾಠಿಯಲ್ಲಿ 'ತೂಪ್' ಎನ್ನುತ್ತಾರೆ. ಬಹುಶಃ ಅದು ಪ್ರಾಕೃತ ಪದ ಆಗಿರಬಹುದು.

ಪೊಟ್ಟ ತುಪ್ಪ ಎಂಬ ನಾಮಪದಗಳು ಹೇಗೆ ಕನ್ನಡವಲ್ಲವೋ 'ಪಿಟ್ಟೇ ಇ' ಮತ್ತು 'ತೀರ್ ಇ' ಎಂಬ ಕ್ರಿಯಾಪದಗಳೂ ಕನ್ನಡದವಲ್ಲ, ಸಂಸ್ಕೃತದ 'ಪಿಟ' ಧಾತುವಿನಿಂದ 'ಪಿಟ್ಟೇ ಇ' ಬಂದಿದೆ. 'ಪಿಟ' ಶಬ್ದಕ್ಕೆ 'ಹೊಡೆ' ಎಂಬ ಅರ್ಥ ಸಂಸ್ಕೃತದಲ್ಲಿದೆ. 'ಪಿಟ ಶಬ್ದ ಸಂಘಾತಯೋಃ' ಎಂದು ಧಾತುಪ್ರಕಾಶಿಕಾ ತಿಳಿಸುತ್ತದೆ.[13] 'ಪಿಟ'ದಿಂದ 'ಚಪೇಟಿಕಾ' ಎಂಬ ಕ್ರಿಯಾಪದ ನಿಷ್ಪನ್ನವಾಗುತ್ತದೆ. ಅದರ ಅರ್ಥ 'ಹೊಡೆಯುವುದು'

11 ಉದಯ ಭಾರತ, ಕನ್ನಡ ಸಾಹಿತ್ಯದ ಪ್ರಾಚೀನತೆ (ವಿಭವ-ಶ್ರಾವಣ) ಓಗಸ್ಟ (೧೯೨೮), ಸಂಪುಟ ೨, ಸಂಚಿಕೆ ೫.

12 ಗೋವಿಂದ ಪೈ, ಮೂರು ಉಪನ್ಯಾಸಗಳು : ಕನ್ನಡ ಸಾಹಿತ್ಯದ ಪ್ರಾಚೀನತೆ.

13 ಧಾತು ಪ್ರಕಾಶಿಕಾ (ತೆಲುಗು ಲಿಪಿ) ಪು. ೩೧೨, (೧೮೯೮)

ಎಂದು. ಅಂದಮೇಲೆ ಗಾಥಾ ಸಪ್ತಶತಿಯ 'ಪಿಟ್ಟೀ ಇ' ಸಂಸ್ಕೃತದ 'ಪಿಟ' ಧಾತುವಿನಿಂದ ಬಂದ ಕ್ರಿಯಾರೂಪ ಎಂದು ಹೇಳಬಹುದೇ ಹೊರತು ಕನ್ನಡದ 'ಪೆಟ್ಟು' (ಹೊಡೆ) ಎಂಬ ಪದದಿಂದಲ್ಲ.

ಇಂಥದೇ ಮತ್ತೊಂದು ಪದ 'ತೀರ್‌ಇ' ಇದು ತೃ' ಎಂಬ ಸಂಸ್ಕೃತ ಧಾತುವಿನಿಂದ ಬಂದದ್ದು, ಇದರಿಂದ ಸಕರ್ಮಕ ಕ್ರಿಯೆ 'ತರಣಯೋಃ' (ದಾಟು) ಎಂದಾಗುತ್ತದೆ. 'ತೀರ್' ಎಂಬುದಕ್ಕೆ 'ಕರ್ಮಸಮಾಪ್ತಿ' ಎಂಬ ಅರ್ಥ ಹೇಳುತ್ತದೆ ಧಾತುಪಾಠ. 'ಮುಗಿಯುವ' ಎಂಬ ಅರ್ಥದಲ್ಲೇ ಸಂಸ್ಕೃತ ಕನ್ನಡ ಎರಡೂ ಭಾಷೆಗಳಲ್ಲಿ ಇದೆ. ಆದ್ದರಿಂದ 'ತೀರ್' ಕನ್ನಡದ್ದೇ? ಅಥವಾ ಸಂಸ್ಕೃತದ್ದೆ? ಹೇಳುವುದು ಕಷ್ಟ. ಬಹುಶಃ ಪ್ರಾಕೃತದ್ದೇ ಎಂದು ಹೇಳಿದರೆ ತಪ್ಪಾಗದು.

ಈ ಎಲ್ಲ ಅಂಶಗಳ ಆಧಾರದಿಂದ ಪ್ರಾಕೃತ ಗಾಥಾ ಸಪ್ತಶತಿಯಲ್ಲಿ ಬರುವ 'ಕೆಲವು ಪದಗಳು'ಕನ್ನಡದ ಮೂಲವುಳ್ಳವಲ್ಲ–ಎಂದುಹೇಳಬಹುದು[14].

(v) ಜಗತ್ ಪ್ರಸಿದ್ಧ ಭೂಗೋಳ ಶಾಸ್ತ್ರಜ್ಞನಾದ ಟಾಲೆಮಿ (Ptoleme) ಈಜಿಪ್ಟಿನವನು. ಕಾಲ ಸು. ಕ್ರಿ.ಶ. ೧೫೦. ಈತ ಭಾರತ ದೇಶವನ್ನು ಕಣ್ಣಾರ ಕಂಡವನಲ್ಲ. ಆದರೂ ಹಲವರು ನಾವಿಕರು ಹೇಳಿದ ಭಾರತದ ಭೂವಿವರ ಕೇಳಿ, ತಿಳಿದು ಅದರ ಕೆಲವು ಹೆಸರುಗಳನ್ನು ಕೊಡುತ್ತಾನೆ. ಅವು ಕರ್ನಾಟಕದ Banavouasci (ಬನವಾಸಿ), Nagarouris (ನಾಗರೂರು), Tabaso (ತಾವಸಿ), Inde (ಇಂಡಿ), Hiripangalida (ಹಿಂಗಲಜ), Hippokoura (ಹಿಪ್ಪರಗಿ), Sabatha (ಸವಡಿ), Sirimalaga(ಚಿಮ್ಮಲಗಿ), Kalligeris (ಕಲಗೇರಿ), Modagalla (ಮುದ್ಗಲ), Petirangala (ಹತ್ತಿರ್ಕಿಹಾಳ)—ಮೊದಲಾದ ಊರು, ಕೇರಿ, ಕಲ್, ಹಾಳಗಳು, ಇವು ಕನ್ನಡದ ಪದಗಳೆಂದೂ ಟಾಲೆಮಿಯ ಕಾಲಕ್ಕೆ ಸುಮಾರು ನೂರಿನ್ನೂರು ವರ್ಷಗಳ ಹಿಂದೆಯಾದರೂ ಕನ್ನಡಭಾಷೆ ಚಲಾವಣೆಯಲ್ಲಿತ್ತೆಂದೂ ಊಹಿಸುತ್ತಾರೆ.

ಹಾಲರಾಜನ ಗಾಥಾ ಸಪ್ತಶತಿಯನ್ನು ಆಧಾರವಾಗಿ ಇಟ್ಟುಕೊಳ್ಳದಿದ್ದರೂ ಉಳಿದ ನಾಲ್ಕು ಪ್ರಬಲ ಆಧಾರಗಳ ಮೇಲೆ ಕನ್ನಡ ಭಾಷೆಯು ಕ್ರಿ.ಪೂ. ೫ನೇ ಶತಮಾನದಷ್ಟು ಪ್ರಾಚೀನತೆ ಉಳ್ಳದ್ದೆಂದು ನಿರ್ಧರಿಸಬಹುದು.

---

14 ವಿವರಕ್ಕೆ ನೋಡಿ: ಡಾ॥ ಸಾ. ಶಿ. ಮರುಳಯ್ಯ, ಮನಿಷಾ, ಗಾಥಾ ಸಪ್ತಶತಿ ಪು. ೬೭–೬೮.

## 3.3.0. ಕನ್ನಡ ಭಾಷಾ ವೈಶಿಷ್ಟ್ಯಗಳು :

ಸುಮಾರು ಎರಡೂವರೆ ಸಾವಿರ ವರ್ಷಗಳಷ್ಟು ಪ್ರಾಚೀನತೆಯನ್ನು ಪಡೆದಿರುವ ಕನ್ನಡ ಸ್ವತಂತ್ರ ಶಾಖೆಯಾಗಿ ಅಭಿವೃದ್ಧಿ ಹೊಂದುವ ವೇಳೆಯಲ್ಲಿ ಮೂಲ ದ್ರಾವಿಡದಿಂದ ಬೇರೆಯಾದಂತೆ, ಸೋದರ ಭಾಷೆಗಳಿಂದಲೂ ಭಿನ್ನತೆ ಪಡೆಯಿತು. ಹಲವು ಅಂಶಗಳಲ್ಲಿ ತನ್ನ ವೈಶಿಷ್ಟ್ಯವನ್ನು ಮೆರೆಯಿತು. ಇಂಡೋ–ಯೂರೋಪಿಯನ್ ಮೊದಲಾದ ದ್ರಾವಿಡೇತರ ಭಾಷಾ ಪರಿವಾರಗಳೊಡನೆ ಹೋಲಿಸಿದಾಗ ಗೋಚರಿಸಿದ ದ್ರಾವಿಡ ಭಾಷಾ ವೈಶಿಷ್ಟ್ಯಗಳು ಕನ್ನಡದ ವೈಶಿಷ್ಟ್ಯಗಳೂ ಹೌದು. ತಮಿಳು, ತೆಲುಗು ಮೊದಲಾದ ಸೋದರ ಭಾಷೆಗಳೊಂದಿಗಿನ ಸಾಮ್ಯ ಸಲ್ಲಕ್ಷಣಗಳೂ ಹೌದು. ಆದರೆ ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳ ನಡುವಣ ಸಾಮ್ಯಗಳು ಹಲವು, ವೈಷಮ್ಯಗಳು ಕೆಲವು ಅವುಗಳಲ್ಲಿ ಕೆಲವನ್ನು ಅವಲೋಕಿಸೋಣ.

(ಅ) ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಸ್ವರಗಳು ಸಮಾನ. ಆದರೆ ಮೂಲ ದ್ರಾವಿಡದ ಇಕಾರ ಉಕಾರಗಳು ಕ್ರಮವಾಗಿ ಎಕಾರ ಒಕಾರಗಳಾಗಿ ಪರಿವರ್ತನೆಗೊಂಡಿರುವುದು ಕೆಲವು ದ್ರಾವಿಡ ಭಾಷೆಗಳಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ಕನ್ನಡ, ತೆಲುಗು ಭಾಷೆಗಳು ಇ> ಎ ಮತ್ತು ಉ> ಒ – ಈ ಪರಿವರ್ತಿತ ರೂಪಗಳನ್ನು ಇಂದಿಗೂ ಉಳಿಸಿಕೊಂಡಿವೆ. ಆದರೆ ತಮಿಳು, ಮಲೆಯಾಳಂ ಭಾಷೆಗಳು ಮೂಲ ದ್ರಾವಿಡದ ಮೂಲರೂಪವನ್ನೇ ಪಡೆದುಕೊಂಡಿವೆ.

**ಉದಾಹರಣೆ :**

| ಮೂಲದ್ರಾವಿಡ | ತಮಿಳು | ಮಲೆಯಾಳಂ | ತೆಲುಗು | ಕನ್ನಡ |
|---|---|---|---|---|
| ತಿರೈ | ತಿರೈ | ತಿರ | ತೆರೆ | ತೆರೆ |
| ಪುಗೈ | ಪುಗೈ | ಪುಗ | ಪೊಗೆ | ಪೊಗೆ |

(ಆ) ತಮಿಳಿನಲ್ಲಿ ಕ ಚ ಟ ತ ಪ ಎಂಬ ಅಘೋಷ ಧ್ವನಿಮಾಗಳು ಮಾತ್ರ ಇವೆ. ಗ ಜ ಡ ದ ಬ ಎಂಬ ಘೋಷ ಧ್ವನಿಮಾಗಳಿಲ್ಲ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಎರಡೂ ಇವೆ. ಅವುಗಳ ಅರ್ಥವ್ಯತ್ಯಾಸವೂ ಉಂಟು.

**ಉದಾಹರಣೆ :** ಕಲ್ಲು–ಗಲ್ಲು, ಕೊಂಬೆ–ಗೊಂಬೆ

(ಇ) ಘೋಷ ವರ್ಣಗಳಿಂದ ಆರಂಭವಾಗುವ ಆಕೃತಿಮಾಗಳು ತೆಲುಗಿನಲ್ಲಿದ್ದಂತೆ ಕನ್ನಡದಲ್ಲೂ ಇವೆ. ಆದರೆ ದ್ರಾವಿಡದ ಅನೇಕ ಭಾಷೆಗಳಲ್ಲಿ

ಇಲ್ಲ. ಘೋಷ ವರ್ಣಗಳೇ ಇಲ್ಲದಿರುವುದರಿಂದ ತಮಿಳಿನಲ್ಲಿ ಆರಂಭ ದಲ್ಲಲ್ಲ ಎಲ್ಲೂ ಬರಲು ಸಾಧ್ಯವಿಲ್ಲ. ಆದ್ದರಿಂದಲೇ ಕನ್ನಡದ ಗಣಪತಿ ತಮಿಳಿನಲ್ಲಿ ಕಣಪತಿ ಎಂದು ಕರೆಸಿಕೊಳ್ಳುತ್ತಾನೆ.

(ಈ) 'ಞ' ಕನ್ನಡದಲ್ಲಿ ಉಪ ಧ್ವನಿಮಾ. ಆದರೆ ಮಲೆಯಾಳಂ ಮತ್ತು ತುಳು ಗಳಲ್ಲಿ ಪ್ರಧಾನ ಧ್ವನಿಮಾ.

(ಉ) ತಾಲವ್ಯೀಕರಣ (ಕಕಾರ ಚಕಾರ ಆಗುವುದು) ಕನ್ನಡದಲ್ಲಿ ಕಡಿಮೆ. ತಮಿಳು, ಮಲೆಯಾಳಂಗಳಲ್ಲಿ ವಿಪುಲ. ಕನ್ನಡದಲ್ಲಿನ ಚೆಂದಳಿರು, ಚೆಂದುಟಿ ಮೊದಲಾದ ತಾಲವ್ಯೀಕರಣಕ್ಕೆ ತೆಲುಗು ಪ್ರಭಾವ ಇದ್ದಿರ ಬೇಕು. ಅದು ಕನ್ನಡದಲ್ಲಿ ಸ್ವಾಭಾವಿಕ ಅಲ್ಲ ಎನ್ನುತ್ತಾರೆ ಭಾಷಾ ವಿಜ್ಞಾನಿಗಳು. ಅಂತೆಯೇ ಮೂಲದ್ರಾವಿಡದ ಪುನರ್ರಚನೆಯ ಸಂದರ್ಭದಲ್ಲಿ 'ಕ' ಕಾರವೇ ಮೂಲರೂಪವೆಂದು ನಿರ್ಧರಿಸಲು ಕನ್ನಡ ಸಹಾಯಕವಾಗುತ್ತದೆ ಎಂದು ತಿಳಿಸುತ್ತಾರೆ.

(ಊ) ಚ> ಜ ಬದಲಾವಣೆ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿದೆ. ಆದರೆ ತಮಿಳು ಮೊದಲಾದ ದ್ರಾವಿಡ ಭಾಷೆಗಳಲ್ಲಿಲ್ಲ. ತಮಿಳಿನಲ್ಲಿ ಘೋಷ ವರ್ಣವೇ ಇಲ್ಲದಿರುವುದರಿಂದ ಪರಿವರ್ತನೆಯ ಪ್ರಶ್ನೆ ಏಳುವುದಿಲ್ಲ.

| ತಮಿಳು | ಕನ್ನಡ | ತೆಲುಗು |
|---|---|---|
| ಜೋಡು | ಜೋಡು | ಜೋಡು |
| ಜೋಳಿಗ್ಗೈ | ಜೋಳಿಗೆ | ಜೋಳಿಯ |

(ಋ) ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಮೂಲದ್ರಾವಿಡ ಧ್ವನಿಮಾಗಳಾದ ೞ,ಱ ಗಳನ್ನು ೧೨ನೆಯ ಶತಮಾನದಿಂದೀಚೆಗೆ ಕೈ ಬಿಡಲಾಗಿದೆ. ಆದರೆ ತಮಿಳು ಮತ್ತು ಮಲೆಯಾಳಂಗಳು ಅವುಗಳನ್ನು ಇಂದಿಗೂ ಉಳಿಸಿ ಕೊಂಡಿವೆ.

(ೠ) ಸಂಸ್ಕೃತದ 'ಲ' ಕಾರಕ್ಕೆ ಬದಲಾಗಿ ಬಳಸುವ 'ಳ' ಕಾರವನ್ನು 'ಕ್ಷಳ' ಎಂದು ಕರೆದಿದ್ದಾನೆ ಕೇಶಿರಾಜ.

**ಉದಾಹರಣೆ :** ಕಮಲ> ಕಮಳ

ಕಾಲಿದಾಸ> ಕಾಳಿದಾಸ

ಜಲ> ಜಳ ಇತ್ಯಾದಿ

ಈ ಕ್ಷಳ 'ಳ' ಕಾರರೂಪ ಕನ್ನಡೇತರ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಅಂತೆಯೇ ಇದು ಕೇಶಿರಾಜನ ಸ್ವಕಪೋಲ ಕಲ್ಪಿತವಿದ್ದರೂ ಇರಬಹುದು. ಅಂತೂ ಇದು ಕನ್ನಡದ ವೈಶಿಷ್ಟ್ಯಗಳಲ್ಲಿ ಒಂದು.

(ಎ) ಕನ್ನಡವನ್ನುಳಿದು ಪ ಕಾರಾದಿಯಾದ ಶಬ್ದಗಳು ಎಲ್ಲ ದ್ರಾವಿಡ ಭಾಷೆಗಳಲ್ಲೂ ಹಾಗೆಯೇ ಉಳಿದು ಬರುತ್ತವೆ. ಹಳಗನ್ನಡದ ಪ ಕಾರ ನಡುಗನ್ನಡದಲ್ಲಿ ಹ ಕಾರವಾಗಿದೆ.

**ಉದಾಹರಣೆ :** ಪಸು> ಹಸು

ಪಸುಳೆ> ಹಸುಳೆ ಇತ್ಯಾದಿ

3.3.1. (ಏ) ಕೇಶಿರಾಜ ಕನ್ನಡದ ಒಂಬತ್ತು ಅಸಾಧಾರಣ ಲಕ್ಷಣಗಳನ್ನು ತನ್ನ ಶಬ್ದ ಮಣಿದರ್ಪಣದ ಸಮಾಪ್ತಿ ಸಂದರ್ಭದಲ್ಲಿ ಹೇಳಿ, ಒಂದು ಪಟ್ಟಿ ಕೊಡುತ್ತಾನೆ. ವೃತ್ತ ಹೀಗಿದೆ :

ಗಮಕ ಸಮಾಸದಿಂ ಱ ೞ ಕುಳ ಕ್ಷಳದಿಂ ಶ್ರುತಿಸಹ್ಯ ಸಂಧಿಯಿಂ
ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ ಸಮ ಸಂಸ್ಕೃತೋಕ್ತಿಯಿಂ
ವ ಮ ಹ ಪ ಭೇದದಿಂ ವಿರಹಿತಾವ್ಯಯ ಸಂಸ್ಕೃತಲಿಂಗದಿಂ ಪದೋ
ತ್ತಮ ಶಿಥಿಲದ್ವಿತ್ವದಿಂ ಯತಿವಿಲಂಘನದಿಂದಱಿದಲ್ತೆ ಕನ್ನಡಂ ॥

(೧) ಗಮಕ ಸಮಾಸ (೨) ಱ ೞ ಕುಳ ಕ್ಷಳ (೩) ಶ್ರುತಿಸಹ್ಯಸಂಧಿ (೪) ಸತಿಸಪ್ತಮಿ (೫) ಸಮ ಸಂಸ್ಕೃತೋಕ್ತಿ (೬) ವ <ಮ,ಹ <ಪ ಭೇದ (೭) ಅವ್ಯಯಲಿಂಗ (೮) ಶಿಥಿಲದ್ವಿತ್ವ (೯) ಯತಿವಿಲಂಘನ— ಇವು ಒಂಬತ್ತು ಕನ್ನಡದ ಅಸಾಧಾರಣ ಲಕ್ಷಣಗಳು ಎಂದಿದ್ದಾನೆ.

ಆದರೆ ಭಾಷಾ ವಿಜ್ಞಾನದ ದೃಷ್ಟಿಯಿಂದ ಇವು ಮಹತ್ವದವುಗಳೇನಲ್ಲ. ಕೇಶಿರಾಜ ಬಹುದೊಡ್ಡ ವೈಯಾಕರಣಿ, ಆದರೆ ಭಾಷಾ ವಿಜ್ಞಾನಿ ಅಲ್ಲ. ಅವನ ತಲೆ ತುಂಬ ತುಂಬಿರುವುದು ಸಂಸ್ಕೃತವೇ ಹೊರತು ದ್ರಾವಿಡ ಭಾಷೆಗಳಲ್ಲ. ಸಂಸ್ಕೃತದ ವ್ಯಾಕರಣವನ್ನು ಆದರ್ಶವಾಗಿ ಅಥವಾ ಮೂಲ ಆಕರವಾಗಿ ಇಟ್ಟುಕೊಂಡು ಸೂತ್ರಗಳನ್ನು ಅವಕ್ಕನುಗುಣವಾಗಿ ನೆಯ್ದು, ಕನ್ನಡದಲ್ಲೂ ಅವು ಉಂಟೆಂದು ಹೇಳಿ ಉದಾಹರಣೆಗಳನ್ನು ಬಹು ಕಷ್ಟಪಟ್ಟು ಹುಡುಕಿ ಹೊಸೆಯುತ್ತಾನೆ.

**ಉದಾಹರಣೆಗೆ :** (i) ಸಮುಚಿತವಾಗಿ ಬರ್ಪ ಸತಿಸಪ್ತಮಿ (ii) ಸಮ ಸಂಸ್ಕೃತೋಕ್ತಿ (iii) ಮ> ವ ಭೇದ (iv) ವಿರಹಿತಾವ್ಯಯ

ಸಂಸ್ಕೃತಲಿಂಗ. ಅದೇ ರೀತಿ (v) ಶಿಥಿಲದ್ವಿತ್ವ (vi) ಯತಿ ವಿಲಂಘನ ಗಳು ಛಂದಸ್ಸಿಗೆ ಸಂಬಂಧಿಸಿದ ವಿಷಯಗಳು (vii) ಱ ೞ ಕುಳಗಳು ಮೂಲ ದ್ರಾವಿಡ ಧ್ವನಿಮಾಗಳು.ಅವುಗಳ ಮೇಲೆ ಇಪ್ಪತ್ತೈದು ಪ್ರಧಾನ ದ್ರಾವಿಡ ಭಾಷೆಗಳ ಹಕ್ಕು ಅಧಿಕಾರ ಇದೆ. ಅದು ಕನ್ನಡಕ್ಕಷ್ಟೇ ಮೀಸಲಿಲ್ಲ. (viii) ಪ> ಹ ಭೇದ ಮತ್ತು (ix) ಕ್ಷಳ ವಿಚಾರಗಳು ಹಾಗೂ (x) ಗಮಕ ಸಮಾಸ ಮತ್ತು (xi) ಶ್ರುತಿಸಹ್ಯಸಂಧಿ – ಇವು ತುಂಬು ಅನಿವಾರ್ಯಗಳಲ್ಲದಿದ್ದರೂ ತುಸು ವಿಚಾರಯೋಗ್ಯ.

ಪ> ಹ ಬದಲಾವಣೆ ಮತ್ತು ಕ್ಷಳಗಳ ಬಗೆಗೆ ಮೇಲೆ ವಿವರಿಸಿದೆ. ಈಗ ಗಮಕ ಸಮಾಸದ ಕಡೆಗೆ ಗಮನ ಕೊಡೋಣ.

**ಗಮಕ ಸಮಾಸ :** ಗಮಕ ಸಮಾಸ ಕನ್ನಡದ ವಿಶಿಷ್ಟ ಸಮಾಸ ಕೇಶಿರಾಜನ ದೃಷ್ಟಿಯಲ್ಲಿ. ಅಂತೆಯೇ ಅದು ಕರ್ಮಧಾರೆಯದ ಒಂದು ಪ್ರಭೇದ ಕೂಡ. ಸಮು ಚ್ಚಯ ವಶದಿಂದ ಗಮಕವು ತತ್ಪುರುಷವೂ ಆಗುತ್ತದೆ. ಹೀಗೆಂದು ಕೇಶಿರಾಜನೇ ಹೇಳಿಕೊಂಡಿದ್ದಾನೆ. ಆದರೂ ಗಮಕ ಕನ್ನಡದ ವಿಶಿಷ್ಟ ಆದದ್ದು ಹೇಗೆ? ವ್ಯಾಕರಣ ಅಥವಾ ಭಾಷಾ ವಿಜ್ಞಾನದ ದೃಷ್ಟಿಯಿಂದ ಅಲ್ಲ. ಭಾಷಾ ಮರ್ಯಾದೆಯ ದೃಷ್ಟಿ ಯಿಂದ. ಈಗ ವಿವರ ತಿಳಿಯೋಣ.

[15]'ಗಮಕ' ಸಂಗೀತದ ಪಾರಿಭಾಷಿಕ ಶಬ್ದ. ಅದರ ಅರ್ಥ ವಿವರಿಸು, ಸ್ಫುಟ ಗೊಳಿಸು, ವ್ಯಕ್ತಪಡಿಸು ಎಂದು. ಪ್ರಸ್ತುತದಲ್ಲಿ 'ವಿವರಿಸು' ಎಂಬ ಅರ್ಥ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಏಕೆಂದರೆ ಗಮಕ ಸಮಾಸವಲ್ಲದ ಸಮಾಸ; ಶಿಥಿಲ ಸಮಾಸ, ಪದಕ್ಕೆ ಪದಗಳು ಅನ್ಯೋನ್ಯವಾಗಿ ಸೇರಿ ಹೊಸ ಭಾಷಾರೂಪವೊಂದು ಸಿದ್ಧಿಸಿದರೆ ಮಾತ್ರ ಅದನ್ನು ಸಮಾಸವೆನ್ನುತ್ತೇವೆ. ಆದರೆ ಗಮಕ ಸಮಾಸದಲ್ಲಿ ಅಂತಹ ಪದಗಳ 'ಕೂಡುವಳಿಯೇ' ಇಲ್ಲ. ಉದಾಹರಣೆಗಳನ್ನು ಗಮನಿಸಿ:

ಅವ + ಮಾತು = ಅವಮಾತು

ಅಸಿಯ + ನಡು = ಅಸಿಯನಡು

ಪಸಿಯ + ಬಣ್ಣ = ಪಸಿಯಬಣ್ಣ ಇತ್ಯಾದಿ.

ಅದೇ ರೀತಿ ವಿಶೇಷಣ ಪೂರ್ವಪದ ಕರ್ಮಧಾರೆಯ ಸಮಾಸವನ್ನು ವಿಗ್ರಹ ವಾಕ್ಯ ಮಾಡಿದರೆ ಕನ್ನಡದಲ್ಲಿ ಗಮಕ ಸಮಾಸ ಆಗುತ್ತದೆ. ಉದಾಹರಣೆಗೆ: ಬೆಳ್ಗೊಡೆ.

---

15. ಸಂಗೀತ ಸಂದರ್ಭದಲ್ಲಿ ಗಮಕ ಎಂದರೆ ಸಂಗೀತದ ಮೂಲಕ ಮಾತನಾಡುವುದು ಎಂದು.

ಇದನ್ನು ವಿಗ್ರಹವಾಕ್ಯ ಮಾಡಿದರೆ ಬಿಳಿಯ+ಕೊಡೆ ಎಂದಾಗುತ್ತದೆ. ಉತ್ತರಪದ ಪ್ರಧಾನವಿದ್ದು (ಕೊಡೆ), ಪೂರ್ವಪದದಲ್ಲಿ ಒಂದು ವಿಶೇಷಣ (ಬಿಳಿಯ) ಇರುವುದರಿಂದ ಬೆಳ್ಗೊಡೆ ವಿಶೇಷಣ ಪೂರ್ವಪದ ಕರ್ಮಧಾರೆಯ ಸಮಾಸ. ಇದನ್ನು ಬಿಡಿಸಿ 'ಬಿಳಿಯ ಕೊಡೆ' ಮಾಡಿದರೆ ಅದು ಗಮಕ ಸಮಾಸ ಆಗುತ್ತದೆ ಎನ್ನುತ್ತಾನೆ, ಮಾಡಿ ತೋರಿದ್ದಾನೆ ಕೇಶಿರಾಜ. ಇದೇ ರೀತಿ 'ಬೆಟ್ಟದಾವರೆ' ಷಷ್ಠೀ ತತ್ಪುರುಷ ಸಮಾಸವಷ್ಟೆ. ಇದನ್ನು 'ಬೆಟ್ಟದತಾವರೆ' ಎಂದು ವಿಗ್ರಹವಾಕ್ಯಗೈದರೆ ಗಮಕ ಸಮಾಸ ಆಯಿತು.

ಹೀಗಿರುವ ಭಾಷಾ ವ್ಯವಸ್ಥೆಯನ್ನು 'ಸಮಾಸ' ಎಂದು ಕರೆಯಬಹುದೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆದರೂ ಕೇಶಿರಾಜ 'ಲಲಿತವಹ ಕನ್ನಡ ನುಡಿಯ' ಜಾಯಮಾನಕ್ಕೆ ಗಮಕ ಹೊಂದಿಕೊಳ್ಳುವುದರಿಂದ, ಶ್ರುತಿಕಷ್ಟವಾಗಲಿ, ಉಚ್ಚಾರಣೆಯ ಶ್ರಮವಾಗಲಿ ಇಲ್ಲದ ಸರಳ ಸರಾಗ ಉಚ್ಚಾರ ಸೌಲಭ್ಯ ದೊರೆಕೊಳ್ಳುವುದರಿಂದ ಅದನ್ನು 'ಸಮಾಸ' ಎಂದು ಕರೆದಿದ್ದಾನೆ.

ಶ್ರುತಿ ಸಹ್ಯಸಂಧಿಯೂ ಇಂತಹ ಕನ್ನಡಭಾಷಾ ಜಾಯಮಾನಕ್ಕೆ ಸೇರಿದ ಅಂಶ. ಅದರಲ್ಲಿ ಬೇರಾವ ಭಾಷಾ ವಿಜ್ಞಾನ ವೈಶಿಷ್ಟ್ಯವೂ ಇಲ್ಲ. ಆದರೂ ಕನ್ನಡದ ವೈಶಿಷ್ಟ್ಯಕ್ಕೆ ಕೇಶಿರಾಜನ ಮಾತುಗಳೂ ದನಿಗೂಡಿಸುತ್ತವೆ ಎಂದು ಹೇಳಬಹುದು.

# ೪. ಕನ್ನಡ ಭಾಷೆಯ ಅವಸ್ಥಾ ಭೇದಗಳು

**3.4.0.** ಸುಮಾರು ಎರಡೂವರೆ ಸಾವಿರ ವರ್ಷಗಳ ಸುದೀರ್ಘ ಇತಿಹಾಸವುಳ್ಳ ಕನ್ನಡ ಅಂದಿನಿಂದ ಇಂದಿನವರೆಗೂ ಏಕರೂಪದಲ್ಲಿಲ್ಲ, ಇರಲು ಸಾಧ್ಯವೂ ಇಲ್ಲ. ಆದರ ಸ್ಥಿತ್ಯಂತರ ಸ್ತರಗಳನ್ನು ಗುರುತಿಸುವುದು ಅಧ್ಯಯನ ದೃಷ್ಟಿಯಿಂದ ಅತ್ಯಗತ್ಯ. ಆ ಪ್ರಯತ್ನದ ಫಲವಾಗಿ ವಿದ್ವಾಂಸರು ಕನ್ನಡ ಭಾಷೆಯ ಘಟ್ಟಗಳನ್ನು ಮೂರು ಅಥವಾ ನಾಲ್ಕು ಎಂದು ಗುರುತಿಸಿದ್ದಾರೆ. ಅವರ ಅಭಿಪ್ರಾಯಗಳು ಈ ರೀತಿ ಇವೆ.

(೧) ಕನ್ನಡ ಕಾಲಖಂಡಗಳ (periods) ಅಧ್ಯಯನಕ್ಕೆ ಕ್ರಿ.ಶ. ೧೮೮೪ ರಲ್ಲಿ ನಾಂದಿ ಹಾಡಿದವರು ಬಿ.ಎಲ್. ರೈಸ್‌ರವರು. ಅವರು ಕ್ರಿ.ಶ. ೩ರಿಂದ ಕ್ರಿ.ಶ. ೭ರ ವರೆಗೆ ಪೂರ್ವದ ಹಳಗನ್ನಡ. ಕ್ರಿ.ಶ. ೮ ರಿಂದ ೧೪ರ ವರೆಗೆ ಹಳಗನ್ನಡ. ಅನಂತರದ್ದು ಹೊಸಗನ್ನಡ – ಎಂದು ಮೂರು ಸ್ತರಗಳನ್ನು ಗುರುತಿಸಿ ಹೇಳಿದರು.

(೨) ೧೯೦೩ ರಲ್ಲಿ ಎಫ್. ಕಿಟ್ಟಲ್‌ರವರು ಅದೇ ಮೂರು ಹಂತಗಳನ್ನು ಅನುಮೋದಿಸಿದರು. ಆದರೆ ಕಾಲದ ಬಗೆಗೆ ಅಲ್ಪ ಸ್ವಲ್ಪ ವ್ಯತ್ಯಾಸ ಸೂಚಿಸಿದರು.

(೩) ಆರ್. ನರಸಿಂಹಾಚಾರ್ಯರು 'ಕನ್ನಡ ಭಾಷೆಗೆ ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡ ಎಂಬ ಮೂರು ಅವಸ್ಥೆಗಳಿರುವಂತೆ ತೋರುತ್ತದೆ. 'ನೃಪತುಂಗನು ತನ್ನ ಕಾಲಕ್ಕೆ ಹಿಂದೆ ಹಳಗನ್ನಡವೆಂಬ ಭಾಷೆಯಿದ್ದಂತೆ' ಹೇಳಿದ್ದಾನೆ. ಪೂರ್ವದ ಹಳಗನ್ನಡವು ಕದಂಬರ ರಾಜಧಾನಿಯಾದ ಬನವಾಸಿಯಲ್ಲಿ ವ್ಯವಹಾರದಲ್ಲಿದ್ದಂತೆಯೂ ೮ನೆಯ ಶತಮಾನದ ವರೆಗೆ ಬಳಕೆಯಲ್ಲಿದ್ದಂತೆಯೂ ಕೆಲವರು ಹೇಳುತ್ತಾರೆ. ತರುವಾಯ ಹಳಗನ್ನಡವು ೧೪ನೆಯ ಶತಮಾನದವರೆಗೂ ಪ್ರಚಾರದಲ್ಲಿದ್ದಿತು. ಅಲ್ಲಿಂದೀಚೆಗೆ ಹೊಸಗನ್ನಡವು ಬಳಕೆಗೆ ಬಂದಿತು–ಎಂದು ಹೇಳಿ,

ಅನಂತರ ತಮ್ಮ ಹೇಳಿಕೆಗೆ ತಾವೇ ತಿದ್ದುಪಡಿ ಸೂಚಿಸಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂದು ನಾಲ್ಕು ಘಟ್ಟಗಳನ್ನು ಗುರುತಿಸಿದರು.

ರಂ. ಶ್ರೀ. ಮುಗಳಿಯವರು ಹಳಗನ್ನಡ ಮತ್ತು ಹೊಸಗನ್ನಡ ಎಂದು ಎರಡೇ ಘಟ್ಟಗಳನ್ನು ಹೇಳಿದರೆ, ಮಾಸ್ತಿಯವರು ಬೆಳೆಯುವ ಭಾಷೆಗೆ ಭಿನ್ನಸ್ತರಗಳ ಅಗತ್ಯ ಇಲ್ಲ. ಆದ್ದರಿಂದ ಕನ್ನಡ ಭಾಷೆಗೆ ಹಂತಗಳೇ ಇಲ್ಲ ಎಂದು ಸಾರಿದರು. ಆದರೆ ಶಿಶುವಿನ ಚಹರೆ ಬಾಲ್ಯದಲ್ಲಿ, ಯೌವನದಲ್ಲಿ, ಮುಪ್ಪಿನಲ್ಲಿ ಒಂದೇ ರೀತಿ ಇರುವುದಿಲ್ಲ. ಹಂತ ಹಂತಕ್ಕೂ ಅದು ಗುರುತಿಸಲಾಗದಷ್ಟು ಬದಲಾಗುತ್ತದೆ. ಅಂದ ಮೇಲೆ ಬೆಳೆಯುವ ಭಾಷೆ ತನ್ನ ರೂಪರೇಷೆಗಳನ್ನು ಬದಲಿಸಿಕೊಳ್ಳದಿರುವುದಿಲ್ಲ. ಆದ್ದರಿಂದ ಮಾಸ್ತಿ ಹಾಗೂ ಮುಗಳಿಯವರ ವಾದಗಳಿಗಿಂತ ರಾ. ನರಸಿಂಹಾಚಾರ್ಯರ ಅಭಿಪ್ರಾಯವನ್ನು ಹೆಚ್ಚು ಸೂಕ್ತ ಹಾಗೂ ಸಾಧು ಎಂದು ಹೇಳಬಹುದು. ಈ ಕೆಳಗಿನ ಉದ್ಧೃತಿಗಳನ್ನು ಗಮನಿಸಿದರೆ ಮೇಲಿನ ಹೇಳಿಕೆಗೆ ಸಮರ್ಥನೆ ದೊರೆತಂತಾಗುತ್ತದೆ.

### 3.4.1 ಪೂರ್ವದ ಹಳಗನ್ನಡ

ಶ್ರೀಮತ್ಕದಂಬಪನ್ ತ್ಯಾಗಸಂಪನ್ನನ್ ಕಲಭೋರನಾ ಅರಿ ಕಕುತ್ಸ್ಥ ಭಟ್ಟೋರನಾಳೆ ನರಿದಾವಿಳೆ ನಾಡುಳ್ ಮೃಗೇಶ ನಾಗೇಂದ್ರಾಭೀಳ ಭಟಹರಪ್ಪೋರ್.... ದಾನಪಶುಪೆನ್ದು ಪೊಗೞೆಪ್ಪೊಟ್ಟಣ ಪಶುಪತಿ ನಾಮಧೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ ಸೇನ್ದ್ರಕ ಬಣೋಭಯದೇಶದಾ ವೀರಾ ಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತಜಯನಾ ವಿಜ ಅರಸನ್ಗೆ ಬಾಳ್ಗೞ್ಚು ಪಲ್ಮಡಿಉಂ ಮೂೞೆವಳ್ಳಿಉಂ ಕೊಟ್ಟಾರ್ ಬಟರಿ ಕುಲದೊನಳು ಕದಮ್ಬನ್ ಕಳ್ದೋನ್ ಮಹಾ ಪಾತಕನ್ (–ಹಲ್ಮಿಡಿ ಶಾಸನ)

### 3.4.2 ಹಳಗನ್ನಡ

ದೇವಾ ಒಂದು ದಿವಸಂ ಸಹಸ್ರಕೂಟ ಚೈತ್ಯಾಲಯಕ್ಕೆ ಕಿಱಿಯಂದೆನ್ನ ನೋದಿಸುವ ಓಜರುಂ ಅನುಂ ಪೋಗಿ ದೇವರಂ ಬಂದಿಸುವನ್ನೆಗಂ ಚರಿತ ಪುರಾಣಂಗಳಂ ವಖ್ಖಾಣಿಸುತ್ತಿರ್ದ ಶಿವಗುಪ್ತರೆಂಬಾಚಾರ್ಯ್ಯರ ಪಕ್ಕದೆ ಕುಳ್ಳಿರ್ದು ವಖ್ಖಾಣೆಯುಂ ಕೇಳುತ್ತಿರ್ಪನ್ನೆಗಂ ನರಕ ವ್ಯಾವರ್ಣನೆಯನಾ ಭಟಾರರಿಂತೆಂದು ಪೇೞ್ದಿದಂ ಕೇಳ್ದಂ ವ್ರತಶೀಲ ಚಾರಿತ್ರಗುಣಂಗಳನಿಲ್ಲದವರುಂ ಜೀವಂಗಳಂ ಕೊಲ್ವರುಂ

ಬೇಂಟೆಯಾಡುವರುಂ ರಾಗದ್ವೇಷ ಲೋಭಂ ಕಾರಣಮಾಗಿ ಪುಸಿನುಡಿದು ಜೀವಂಗಳ್ಗೆ ಸಂತಾಪಮುಂ ವಧೆಯುಮಂ ಮಾಡಿಸುವರುಮಾಱಿಡಿಗೊಳ್ವರುಂ ಕಳ್ವರುಂ ಪೆಱರ ಪೆಂಡಿರೊಳ್ ಮಱಿವಾಳ್ವರುಮಪರಿಮಿತ ಪರಿಗ್ರಹಮುಂ ನೆರಪುವರುಂ ಮತ್ತಂ ಮಧು ಮಧ್ಯ ಮಾಂಸಂಗಳುಮಯ್ದು ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವರುಂ ಮತ್ತಮಮೋಘಮಪೇಯಪೇಯ ಭಕ್ಷ್ಯ ಭಕ್ಷ್ಯಮೆಂದಿವಱೊಳ್ ನೆಗೞ್ವರುಂ ಪಂಚಮಹಾಪಾತಕಂಗಳಂಗೆಯ್ವೊರು ವಿವರೆಲ್ಲಂ ನಿವೃತ್ತಿ ಪರಿಣಾಮಮಿಲ್ಲದೆ ಕಾಲಂಗೆಯ್ದೋಟುಂ ನರಕಂ ಗಳೊಳ್ ಪುಟ್ಟಿ ದುಃಖಂಗಳ ನೆಯ್ದುವರ್.

(-ವಡ್ಡಾರಾಧನೆ, ವಿದ್ಯುಚೋರನೆಂಬರಸಿಯ ಕಥೆ)

## 3.4.3. ನಡುಗನ್ನಡ

ಹರಕರುಣೋದಯಮಾಮಂತರುಣೋದಯಮಾಗೆ ನಿದ್ರೆ ತಿಳಿದೆದ್ದು ಸಾಲ್ಗೊಂಡ ಪುಳಕಂಗಳಂ ಸಂತೈಸಿಕೊಂಡಾನಂದಾಶ್ರುಗಳಂ ಮುಂದುಗೊಳಿಸಿ, ಸಂತಸಮಂ ಸೈತಿಟ್ಟು, ಪರಿಕಿಸಿ ನೋಡಿ ಹರನ ಕರುಣಕ್ಕೆ ಹಾರೈಸಿ, ಅಹಂಕಾರಮಂ ತೇರ್ರೈಸಿ, ಚಿತ್ತದೊಳೊಪ್ಪೈಸಿ ಥೋಂಕನೆದ್ದು ಸಂಗಂಗೆ ಪೊಡಮಟ್ಟು ತವನುಜ್ಞೆ ಯುಂ ಕೈಕೊಂಡು, ಪುಣ್ಯದ ಬಿತ್ತಂ ಬೆಳಗುವಂತೆ ದಂತ ಪಂಜ್ತ್ರಯುಂ ಕಾಂತಿಯಿಟ್ಟು, ಏಕ ನಿಷ್ಠೆಯ ವಜ್ರಾಂಗಿಯಂ ತೊಡುವಂತೆ ಭಸಿತೋದ್ಧೂಳನಂ ಮಾಡಿ, ಸುಕೃತ ಮನಪ್ಪುವಂತೆ ಧವಳ ವಸ್ತ್ರಮನುಟ್ಟು ಪೊದೆದು, ಪುಣ್ಯದ ಫಲಂಗಳ ನಲಂಕರಿಸಿ ಕೊಂಬಂತೆ ರುದ್ರಾಕ್ಷೆಗಳಂ ತೊಟ್ಟು ಸಂಗಮೇಶ್ವರಂಗೆ ಮಜ್ಜನ ಪೂಜೆಯಾರೋಗಣೆ ಗಳನೇಕ ಚಿತ್ತದೊಳ್ಕೈಗೊಳಿಸಿ ಪೊಡಮಂಟು ನಡೆತಂದು.

(–ಹರಿಹರ–ಬಸವರಾಜ ದೇವರ ರಗಳೆ ಸ್ಥಲ–೪)

## 3.4.4. ಹೊಸಗನ್ನಡ

ಮನುಷ್ಯನಿಗಿರುವಂತೆ ರಾಷ್ಟ್ರಕ್ಕೂ ಒಂದು ಮನಸ್ಸಿದೆ. ಅದೊಂದು ಸಮಷ್ಟಿ ಚೇತನ, ರಾಷ್ಟ್ರ ಎಂದರೆ ಕಲ್ಲು, ಮಣ್ಣು, ಬೆಟ್ಟ, ಗುಡ್ಡ, ಮರ, ಮೊರಡಿ, ನದಿ, ತೊರೆ, ಅಡವಿ, ಅರಮನೆಗಳಷ್ಟೇ ಅಲ್ಲ, ಅವೆಲ್ಲವನ್ನೂ ಮೈಗೂಡಿಸಿಕೊಂಡು ಬೆಳೆದ ಸಾಂಸ್ಕೃತಿಕ ಹಿನ್ನೆಲೆಯುಳ್ಳ ಭವ್ಯವಾದ ಬದುಕು. ಭಾರತಕ್ಕೆ ಅಂತಹ ಬದುಕಿನ ಒಂದು ಭವ್ಯ ಪರಂಪರೆ ಇದೆ. ಆ ಪರಂಪರೆಗೆ ಯಾರೂ ಕಿಚ್ಚು ಹಚ್ಚುವ ಹೇಯ ಕಾರ್ಯಕ್ಕೆ ಕೈ ಹಾಕಬಾರದು. ಭಾರತಕ್ಕೆ ಬಾಂಬು ಸಿಡಿಸಿದ ಖ್ಯಾತಿಯಾಗಲಿ, ಅಣು ವಿಜ್ಞಾನ ವನ್ನು ಆವಿಷ್ಕರಿಸಿದ ಹಿರಿಮೆಯಾಗಲಿ ಇಲ್ಲ. ಅಂತರಿಕ್ಷದಲ್ಲಿ ಉಪಗ್ರಹವನ್ನು ಉಡಾ

ಯಿಸಿದ್ದರಿಂದ ಅದು ದೊಡ್ಡದಾಗಿಲ್ಲ. ಅಂದರೆ ಅದು ಬೇಡವೆಂದು ಅಭಿಪ್ರಾಯ ವಲ್ಲ, ಬೇಕು; ಆದರೆ ಅದರಿಂದಾಗಿ ತನ್ನತನದ ಅರಿವು ಮರೆಯಬಾರದು.

(–ಡಾ|| ಸಾ.ಶಿ. ಮರುಳಯ್ಯ, ಮಳ್ಳಿಗೊಂದು ಒಳ್ಳೆ ಮಾತು, ಪು.೬೭-೬೮)

ಮೇಲಿನ ನಾಲ್ಕೂ ಉದ್ಧೃತಿಗಳ ಭಾಷೆ ಕನ್ನಡವೆ. ಆದರೆ ಒಂದು ಮತ್ತೊಂದ ರಿಂದ ಗುರುತಿಸುವಷ್ಟು ಮಟ್ಟಿಗೆ ವ್ಯತ್ಯಾಸ ಅಥವಾ ವೈಶಿಷ್ಟ್ಯ ಉಳ್ಳುದಾಗಿದೆ.

ಈ ಹಂತಗಳಿಗೆ ಅವಧಿಯನ್ನು ಈ ರೀತಿ ಗುರುತಿಸಬಹುದು :

(i) ಕ್ರಿ.ಪೂ. ೫ನೇ ಶತಮಾನದಿಂದ ಕ್ರಿ.ಶ. ೬ನೇ ಶತಮಾನದವರೆಗೆ—ಪೂರ್ವದ ಹಳಗನ್ನಡ,

(ii) ಕ್ರಿ.ಶ. ೭ನೇ ಶತಮಾನದಿಂದ ಕ್ರಿ.ಶ. ೧೧ನೇ ಶತಮಾನದವರೆಗೆ – ಹಳಗನ್ನಡ.

(iii) ಕ್ರಿ.ಶ. ೧೨ನೇ ಶತಮಾನದಿಂದ ಕ್ರಿ.ಶ. ೧೬ನೇ ಶತಮಾನದವರೆಗೆ—ನಡುಗನ್ನಡ.

(iv) ಕ್ರಿ.ಶ. ೧೭ನೇ ಶತಮಾನದಿಂದ ಇತ್ತೀಚಿನವರೆಗಿನದು—ಹೊಸಗನ್ನಡ.

—ಇದು ಸ್ಥೂಲ ವಿಭಜನೆ ಅಷ್ಟೆ. ಕಡ್ಡಿ ಮುರಿದಂತೆ ಬೆಳೆಯುವ ಭಾಷೆಯು ಇಲ್ಲಿಂದ ಆರಂಭವಾಯಿತು, ಇಲ್ಲಿಗೆ ಮುಗಿಯಿತು, ಎಂದು ಬೆರಳಿಟ್ಟು ತೋರಿಸಬರು ವುದಿಲ್ಲ. ಈ ಅವಸ್ಥಾ ಭೇದಗಳು ಇಂತಿಂಥ ಕಾಲದಲ್ಲಿಯೇ ಆರಂಭವಾಗಿ ಇಂತಿಂಥ ಕಾಲದಲ್ಲಿಯೇ ಮುಗಿದುವೆಂದು ಹೇಳಲಿಕ್ಕಾಗುವುದಿಲ್ಲ, ಆ ಆ ಕಾಲಗಳಲ್ಲಿ, ಭಾಷೆ ಯಲ್ಲಿ ವಿಶೇಷವಾಗಿ ಕಾಣಬರುವ ರೂಪಭೇದಗಳನ್ನು ಸ್ಥೂಲವಾಗಿ ಹೀಗೆ ನಿರೂಪಿಸ ಬೇಕಾಗಿದೆ.[16]

3.4.5. (i) ಪ್ರಥಮಾ ವಿಭಕ್ತಿ ಪ್ರತ್ಯಯ : ಪೂರ್ವದ ಹಳಗನ್ನಡದಲ್ಲಿ 'ಅನ್' ಹಳಗನ್ನಡದಲ್ಲಿ 'ಮ್' ನಡುಗನ್ನಡ ಮತ್ತು ಹೊಸಗನ್ನಡದಲ್ಲಿ 'ಉ'

| ಪೂ.ಹ.ಗ | ಹ.ಳ.ಗ | ನಡು.ಗ | ಹೊಸ.ಗ |
|---|---|---|---|
| ಕದಂಬಪನ್ | ಕದಂಬಪಮ್ | ಕದಂಬಪನು | ಕದಂಬಪನು |

(ii) ದ್ವಿತೀಯಾ ವಿಭಕ್ತಿ ಪ್ರತ್ಯಯ : ಪೂರ್ವದ ಹಳಗನ್ನಡದಲ್ಲಿ 'ಅನ್'

---

16. ರಾ. ನರಸಿಂಹಾಚಾರ್ಯ, ಕರ್ನಾಟಕ ಕವಿ ಚರಿತೆ ಸಂಪುಟ ೧, ಪುಟ ೧೧ (೧೯೭೨)

ಹಳಗನ್ನಡದಲ್ಲಿ 'ಅನ್' ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಅನ್ನು'.

ಇತ್ತೊದಾನ್ ಇತ್ತುದನ್ ಇತ್ತುದನು ಇತ್ತುದನ್ನು.

(iii) ದ್ವಿತೀಯಾರ್ಥದಲ್ಲಿ 'ಉಂ' ಸಮುಚ್ಚಯ : ಪೂರ್ವದ ಹಳಗನ್ನಡದಲ್ಲಿ ದ್ವಿತೀಯಾರ್ಥದಲ್ಲಿ ಪ್ರಯೋಗಗೊಳ್ಳುವುದೂ ಉಂಟು. ಹಳಗನ್ನಡದಲ್ಲಿ 'ಅವ್' ಯಥಾಪ್ರಕಾರ ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಅನ್ನು'

ಪಲ್ಮಿಡಿಉಂ ಪಲ್ಮಿಡಿಯುವ್ ಪಲ್ಮಿಡಿಯುನ್ನು ಹಲ್ಮಿಡಿಯುನ್ನು
ಮೂಱಿವಳ್ಳಿಉಂ ಮೂಱಿವಳ್ಳಿಯುವ್ ಮೂಳಿವಳ್ಳಿಯನ್ನು ಮೂಳಿವಳ್ಳಿಯನ್ನು

(iv) ಷಷ್ಠೀ ವಿಭಕ್ತಿ ಪ್ರತ್ಯಯ : ಪೂರ್ವದ ಹಳಗನ್ನಡದಲ್ಲಿ ದೀರ್ಘ 'ಆ' ಹಳಗನ್ನಡ ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ ಹ್ರಸ್ವ 'ಅ'

ಕಲಭೋರನಾ ಕಲಭೋರನ ಕಲಭೋರನ ಕಲಭೋರನ

(v) ಸಪ್ತಮೀ ವಿಭಕ್ತಿ ಪ್ರತ್ಯಯ : ಪೂರ್ವದ ಹಳಗನ್ನಡದಲ್ಲಿ 'ಉಳ್' ಹಳಗನ್ನಡದಲ್ಲಿ 'ಒಳ್' ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಒಳಗೆ'

ನಾಡುಳ್ ನಾಡೊಳ್ ನಾಡೊಳಗೆ ನಾಡೊಳಗೆ

(vi) ವ್ಯಂಜನಾಂತ ಪದಗಳು ಸ್ವರಾಂತವಾಗುವುದು : ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳಲ್ಲಿ ನಾಮ, ಸರ್ವನಾಮ, ಗುಣವಚನ, ಸಂಖ್ಯಾವಾಚಕ, ಆಖ್ಯಾತ ಮೊದಲಾದವುಗಳ ವ್ಯಂಜನಾಂತ ಶಬ್ದಗಳು ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ ಸ್ವರಾಂತಗಳಾಗುತ್ತವೆ.

ರಾಮನ್ ರಾಮನ್ ರಾಮನು ರಾಮನು (ನಾಮಪದ)
ನೀನ್ ನೀನ್ ನೀನು ನೀನು (ಸರ್ವನಾಮ)
ಒಳ್ಳಿದನ್ ಒಳ್ಳಿದನ್ ಒಳ್ಳಿದನು ಒಳ್ಳೆಯವನು (ಗುಣವಾಚಕ)
ಇರ್ವರ್ ಇರ್ವರ್ ಇಬ್ಬರು ಇಬ್ಬರು (ಸಂಖ್ಯಾ ವಾಚಕ)
ಕೇಶವನೆನ್ ಕೇಶವನೆನ್ ಕೇಶವನು ಕೇಶವನು (ಆಖ್ಯಾತ)

(vii) ಆಖ್ಯಾತ ಪ್ರತ್ಯಯ : ಪೂರ್ವದ ಹಳಗನ್ನಡದಲ್ಲಿ 'ಓನ್' ಅಥವಾ 'ಆನ್' ಮತ್ತು 'ಆರ್' ಎಂದು ಏಕವಚನ, ಬಹುವಚನ ರೂಪಗಳಿದ್ದರೆ ಕನ್ನಡದಲ್ಲಿ 'ಅವನ್' 'ಅವರ್' ಮಾತ್ರ ಆಗುತ್ತದೆ. ನಡುಗನ್ನಡ ಮತ್ತು ಹೊಸಗನ್ನಡದಲ್ಲಿ 'ಅವನು' 'ಅವರು' ಆಗುತ್ತದೆ.

| | | | |
|---|---|---|---|
| ಕಳ್ದೋನ್ | ಕಳ್ದವನ್ | ಕದ್ದವನು | ಕದ್ದವನು |
| ಸಂದಾನ್ | ಸಂದವನ್ | ಸಂದವನು | ಸಂದವನು |
| ಏಱಿದಾರ್ | ಏಱಿದವರ್ | ಏರಿದವರು | ಏರಿದವರು |

(viii) ಪ್ರಥಮ ಪುರುಷ ಏಕವಚನ ; ಪೂರ್ವದ ಹಳಗನ್ನಡದಲ್ಲಿ 'ಅರ್' 'ಆರ್' ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಅನು' 'ಅರು' ಆಗಿ ಪ್ರಯೋಗಗೊಳ್ಳುತ್ತದೆ.

| | | | |
|---|---|---|---|
| ಅಪ್ಪೋರ್ | ಅಪ್ಪರ್ | ಅಪ್ಪರು | ಅಪ್ಪರು |
| ಭಟ್ಟೋರನ್ | ಭಟಾರಾನ್(ಭಟಾರ) | ಭಟ(ಭಟರು) | ಭಟರು |

(ix) ವಿಜಾತೀಯ ದ್ವಿತ್ವಾಕ್ಷರ ಸ್ವಜಾತೀಯವಾಗುವುದು : ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳಲ್ಲಿನ ವಿಜಾತೀಯ ದ್ವಿತ್ವಾಕ್ಷರಗಳು ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ ಸಜಾತೀಯವಾಗುತ್ತವೆ.

| | | | |
|---|---|---|---|
| ಗಟ್ದಿ | ಗಟ್ದಿ | ಗದ್ದೆ | ಗದ್ದೆ |

(x) ವಿಜಾತೀಯ ದ್ವಿತ್ವಾಕ್ಷರಗಳು ಲೋಪವಾಗುವುದು : ಪೂರ್ವದ ಹಳಗನ್ನಡ ಮತ್ತು ಹಳಗನ್ನಡದ ವಿಜಾತೀಯ ದ್ವಿತ್ವಾಕ್ಷರಗಳು ಸಜಾತೀಯವಾದಂತೆ, ಹಲವು ವೇಳೆ ದ್ವಿತ್ವ ಲೋಪವಾಗುವುದುಂಟು.

| | | | |
|---|---|---|---|
| ನಾಣ್ಚು | ನಾಣ್ಚು | ನಾಚು | ನಾಚು |
| ಸೋಲ್ತು | ಸೋಲ್ತು | ಸೋತು | ಸೋತು |

(xi) ಸಜಾತೀಯ ದ್ವಿತ್ವಗಳ ಲೋಪ : ಪೂರ್ವದ ಹಳಗನ್ನಡದ ಕೆಲವು ಸಜಾತೀಯ ದ್ವಿತ್ವಗಳು ಹಳಗನ್ನಡ ಮೊದಲಾದವುಗಳಲ್ಲಿ ಲೋಪವಾಗುತ್ತವೆ.

| | | | |
|---|---|---|---|
| ತಲೆಪ್ಪೊೞೆ | ತಲೆಪೊೞೆ | ತಲೆಪೊರೆ | ತಲೆಪೊರೆ |

(xii) ವಿಜಾತೀಯ ದ್ವಿತ್ವಾಕ್ಷರದಲ್ಲಿ ಸ್ವರಭಕ್ತಿ ಪ್ರಕ್ರಿಯೆ: ಹಳಗನ್ನಡ ರೂಪಗಳ ನಡುವೆ ಸ್ವರ ಸೇರಿ ನಡುಗನ್ನಡದಲ್ಲಿ ಸರಳೀಕರಣಕ್ರಿಯೆ ನಡೆಯುವುದುಂಟು.

| | | | |
|---|---|---|---|
| — | ಸಿಲ್ಕಿ | ಸಿಲುಕಿ | ಸಿಕ್ಕಿ |
| — | ಬೆಳ್ಪು | ಬೆಳುಪು | ಬಿಳುಪು |

(xiii) ಎ>ಇ ಪರಿವರ್ತನೆ: ಪೂರ್ವದ ಹಳಗನ್ನಡದಲ್ಲಿ ಕ್ರಿಯಾಪದದಲ್ಲಿ ಆದಿವರ್ಣ 'ಎ' ಹಳಗನ್ನಡ. ನಡುಗನ್ನಡ ಮತ್ತು ಹೊಸಗನ್ನಡದಲ್ಲಿ 'ಇ' ಆಗಿ ಪರಿವರ್ತನೆಗೊಳ್ಳುತ್ತದೆ.

| | | | |
|---|---|---|---|
| ಕಾದೆೞ್ದ | ಕಾದಿೞ್ದ | ಕಾದಿರಿದ | ಕಾದಿರಿದ |

(xiv) ಆರ್>ಅರು ಪ್ರಯೋಗ: ಪೂರ್ವದ ಹಳಗನ್ನಡದಲ್ಲಿ ಕ್ರಿಯಾಪದ ಪುಲ್ಲಿಂಗ ಸ್ತ್ರೀಲಿಂಗಗಳಿಗೆ ಸಂಬಂಧಿಸಿದಂತೆ ಬರುವ ಬಹುವಚನ ಪ್ರತ್ಯಯ 'ಆರ್' ಎಂದಿದ್ದರೆ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಅರ್' ಆಗುತ್ತದೆ.

| | | | |
|---|---|---|---|
| ಕೊಟ್ಟಾರ್ | ಕೊಟ್ಟರ್ | ಕೊಟ್ಟರು | ಕೊಟ್ಟರು |

(xv) ಕ್ರಿಯಾಪದ ನಿಷೇಧರೂಪ ಆ>ಅ: ಎ>ಇ ಪರಿವರ್ತನ: ಹಳಗನ್ನಡದ ಕ್ರಿಯಾಪದದ ನಿಷೇಧರೂಪ 'ಆ' ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಅ' ಆಗಿಯೂ ಎ>ಇ ಆಗಿಯೂ ಪರಿವರ್ತಿತವಾಗುತ್ತದೆ.

| | | | |
|---|---|---|---|
| — | ತಪ್ಪಾದೆ | ತಪ್ಪದೆ | ತಪ್ಪದೆ |
| — | ಇಲ್ಲೆ | ಇಲ್ಲ | ಇಲ್ಲ |

(xvi) ವಿಧ್ಯರ್ಥಕ ಕ್ರಿಯೆಯ ಗ.ಕ>ಗೆ.ಕೆ ಆಗಿ ಪರಿವರ್ತನ: ಪ್ರಥಮ ಪುರುಷ ವಿಧ್ಯರ್ಥಕ ಕ್ರಿಯೆಯ ಸಂದರ್ಭದಲ್ಲಿ ಪೂರ್ವದ ಹಳಗನ್ನಡ 'ಗ' 'ಕ' ಗಳು ಹಳಗನ್ನಡದಲ್ಲಿ 'ಗೆ' 'ಕೆ' ಆಗಿ ನಡುಗನ್ನಡ ಮತ್ತು ಹೊಸಗನ್ನಡದಲ್ಲಿ 'ಅಲಿ' ಆಗಿ ಪರಿವರ್ತನೆಗೊಳ್ಳುತ್ತವೆ.

| | | | |
|---|---|---|---|
| ಕೊಳ್ಗೆ | ಕೊಳ್ಗೆ | ಕೊಳ್ಳಲಿ | ಕೊಳ್ಳಲಿ |
| ರಕ್ಷಿಕೆ | ರಕ್ಷಿಕ್ಕೆ | ರಕ್ಷಿಸಲಿ | ರಕ್ಷಿಸಲಿ |

(ಹಳಗನ್ನಡದಲ್ಲಿ ದ್ವಿತ್ವವೂ ಬಂದಿರುವುದುಂಟು)

(xvii) ಒ> ಉ ಪರಿವರ್ತನೆ : ಪೂರ್ವದ ಹಳಗನ್ನಡ ನಾಮಪದಗಳ 'ಒ' ಕಾರವು ಹಳಗನ್ನಡದಲ್ಲಿ 'ಉ'ಕಾರವಾಗುತ್ತದೆ. ಮತ್ತೆ ನಡುಗನ್ನಡ ಹೊಸಗನ್ನಡಗಳಲ್ಲಿ 'ಒ'ಕಾರವೇ ಆಗಿ ಉಳಿಯುತ್ತದೆ.

ಪೊಗು ಪುಗು ಹೊಗು ಹೊಗು(ಹೊಕ್ಕು)

(xviii) ಒಡು> ಉದು ಪರಿವರ್ತನೆ : ಪೂರ್ವದ ಹಳಗನ್ನಡದ ನಪುಂಸಕಲಿಂಗ ಪ್ರತ್ಯಯವಾದ'ಒಡು' ಹಳಗನ್ನಡದಲ್ಲಿ 'ಉದು' ಆಗುತ್ತೆ,ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಅದು' 'ಅದ್ದು' ಎಂದು ಪ್ರಯೋಗವಾಗುತ್ತದೆ.

ಕೊಟ್ಟೊಡು ಕೊಟ್ಟುದು ಕೊಟ್ಟದ್ದು ಕೊಟ್ಟದ್ದು

(xix) ಪ> ಬ ಪರಿವರ್ತನೆ : ಪೂರ್ವದ ಹಳಗನ್ನಡದ 'ಪ'ಕಾರ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಬ'ಕಾರವಾಗುತ್ತದೆ.

ಪೆಟ್ಟು ಬೆಟ್ಟು ಬೆಟ್ಟು ಬೆಟ್ಟು

(xx) ಪ> ಹ ಪರಿವರ್ತನೆ : ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳಲ್ಲಿನ 'ಪ'ಕಾರ ನಡುಗನ್ನಡ, ಹೊಸಗನ್ನಡಗಳಲ್ಲಿ 'ಹ' ಕಾರವಾಗಿ ಪರಿವರ್ತಿತವಾಗುತ್ತದೆ.

ಪಸು ಪಸು ಹಸು ಹಸು

(xxi) ಱ> ರ ಪರಿವರ್ತನೆ : ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳ ಶಕಟರೇಫ 'ಱ'ಕಾರವು ನಡುಗನ್ನಡ ಹೊಸಗನ್ನಡಗಳಲ್ಲಿ ರೇಫ 'ರ' ಆಗಿ ಪರಿವರ್ತಿತವಾಗಿದೆ.

ಅಱಿ ಅಱಿ ಅರಿ ಅರಿ

(xxii) ೞ> ಳ ಪರಿವರ್ತನೆ : ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳ ಱ, ೞ, ವು ನಡುಗನ್ನಡ ಹೊಸಗನ್ನಡಗಳಲ್ಲಿ ಕುಳ 'ಳ'ಕಾರವಾಗಿ ಬಳಕೆಯಾಗಿದೆ.

ಮೞೆ ಮೞೆ ಮಳೆ ಮಳೆ

(xxiii) ಲ> ಳ ಪರಿವರ್ತನೆ : ಹಳಗನ್ನಡದ 'ಲ'ಕಾರವು ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ 'ಳ'ಕಾರವಾಗಿ ಪರಿವರ್ತಿತವಾಗುತ್ತದೆ.

| | | | |
|---|---|---|---|
| — | ಬೆರಲ್ | ಬೆರಳು | ಬೆರಳು |
| — | ಎರಲ್ | ಎರಳು | ಎರಳು |
| — | ಕೊರಲ್ | ಕೊರಳು | ಕೊರಳು |

(xxiv) ಸ ಬಿಂದುಕ> ಅ ಬಿಂದುಕ ಪರಿವರ್ತನೆ : ಹಳಗನ್ನಡಗಳಲ್ಲಿನ ಸಬಿಂದುಕಗಳು ನಡುಗನ್ನಡ ಹೊಸಗನ್ನಡಗಳಲ್ಲಿ ಅ ಬಿಂದುಕಗಳಾಗುವುದುಂಟು.

| | | | |
|---|---|---|---|
| — | ತೋಂಟ | ತೋಟ | ತೋಟ |
| — | ಬೇಂಟೆ | ಬೇಟೆ | ಬೇಟೆ |
| — | ದಾಂಟು | ದಾಟು | ದಾಟು |

(xxv) ರೇಫ ಸಹಿತ ವ> ರೇಫ ಸಹಿತ 'ಬ' ಬದಲಾವಣೆ : ಹಳಗನ್ನಡದ ರೇಫ ಸಹಿತ ದ್ವಿತ್ವ 'ವ'ಕಾರವು ನಡುಗನ್ನಡದಲ್ಲಿ ರೇಫ ಸಹಿತ 'ಬ' ಕಾರವಾಗಿಯೂ, ಹೊಸಗನ್ನಡದಲ್ಲಿ ರೇಫ ರಹಿತ ದ್ವಿತ್ವವಾಗಿಯೂ ಉಳಿಯುತ್ತದೆ.

| | | | |
|---|---|---|---|
| — | ಒರ್ವನ್ | ಒರ್ಬನ್ | ಒಬ್ಬನು |

(xxvi) ಒಡೆ> ಆಡೆ> ಅರೆ ಪರಿವರ್ತನೆ : ಹಳಗನ್ನಡ ಅಪೂರ್ಣ ಕ್ರಿಯೆಯ 'ಒಡೆ' ನಡುಗನ್ನಡದಲ್ಲಿ 'ಅಡೆ' ಆಗಿಯೂ, ಹೊಸಗನ್ನಡದಲ್ಲಿ 'ಅರೆ' ಆಗಿಯೂ ಪರಿವರ್ತಿತವಾಗುತ್ತದೆ.

| | | | |
|---|---|---|---|
| — | ನುಡಿದೊಡೆ | ನುಡಿದಡೆ(ರೆ) | ನುಡಿದರೆ |

(xxvii) ಬೆಳೆ ಮತ್ತು ಬಳೆ ಪ್ರಯೋಗ : ಬೆಳೆ ಸಸ್ಯವೃದ್ಧಿಗೂ ಬಳೆ ಮಾನವ ವೃದ್ಧಿಗೂ ಬಳಕೆಯಾಗಬೇಕೆಂಬುದು ಹಳಗನ್ನಡದ ನಿಯಮ. ಆದರೆ ಅದನ್ನು ತ್ಯಜಿಸಿ ಎರಡೂ ಸಂದರ್ಭಗಳಲ್ಲಿ 'ಬೆಳೆ' ಬಳಕೆಯಾಗುತ್ತದೆ ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ.

| | | | |
|---|---|---|---|
| — | ಬೆಳೆ(ಸಸ್ಯ) | ಬೆಳೆ | ಬೆಳೆ |
| | ಬಳೆ(ಮಾನವ) | ಬೆಳೆ | ಬೆಳೆ |

(xxviii) ಫ ಮತ್ತು ಜ ಧ್ವನಿಮಾಗಳು : ಅನ್ಯಭಾಷೆಗಳಾದ ಇಂಗ್ಲಿಷ್ ಮತ್ತು ಉರ್ದು-ಪರ್ಷಿಯನ್‌ಗಳ ಸಂಪರ್ಕದಿಂದ ಫಾದರ್ ಅನ್ನುವಾಗ 'ಫ' 'ಜೂ' ಅನ್ನುವಾಗ 'ಜ' ಧ್ವನಿಮಾಗಳನ್ನು ಹೊಸಗನ್ನಡ ರೂಪಿಸಿಕೊಂಡಿದೆ.

# ೫ ಕನ್ನಡ ಪ್ರಾಂತ ಭೇದಗಳು ಅಥವಾ ಕನ್ನಡ ಉಪಭಾಷೆಗಳು :

3.5.0 ಭಾಷೆಗೆ ವ್ಯಕ್ತಿತ್ವ ಸಿದ್ಧಿಸುವುದು ವ್ಯಕ್ತಿಗಳಿಂದ. ಆದರೆ ಒಂದು ಭಾಷೆಯನ್ನಾಡುವ ಒಂದು ಪ್ರದೇಶದ ಒಂದು ಜನಾಂಗ ಸಾಮಾನ್ಯವಾಗಿ ಒಂದೇ ಭಾಷಾತಂತುವಿಡಿದು ನುಡಿಯುತ್ತಾರೆ. ಅವರ ಮಾತುಗಳಲ್ಲಿ ಏಕರೂಪತೆ ಇರುತ್ತದೆ. ಏಕ ವ್ಯಕ್ತಿಯಭಾಷೆ ಒಂದು ಸಮುದಾಯದ ಭಾಷೆಯೂ ಆಗುತ್ತದೆ. ಒಂದು ನಿರ್ದಿಷ್ಟ ವಲಯದಲ್ಲಿರುವ ಯಾರಾದರೂ ಕನ್ನಡ ಎಂದರೆ ಹೇಗಿರುತ್ತೆ ? ಎಂದು ಕೇಳಿದರೆ ಒಬ್ಬ, ಕನ್ನಡ ಮಾತನಾಡುವವನನ್ನು ತೋರಿಸಿದರೆ ಸಾಕು, ಅವನು ಇಡೀ ಕನ್ನಡಾಭಿವ್ಯಕ್ತಿಯ ಪ್ರತಿನಿಧಿಯಾಗುತ್ತಾನೆ. ಅವನಾಡುವ ನುಡಿ ಸಮುದಾಯವೊಂದರ ನುಡಿಯಾಗುತ್ತದೆ. ಇದನ್ನು ವ್ಯಕ್ತಿಭಾಷೆ (Idiolect) ಎನ್ನುತ್ತಾರೆ.

ವ್ಯಕ್ತಿಭಾಷೆ ಎನ್ನುವುದು ಒಂದು ನಿರ್ದಿಷ್ಟವಲಯದಲ್ಲಿರುವ ವ್ಯಕ್ತಿಯ ಆಡುನುಡಿ ಅಭ್ಯಾಸಗಳ (Speech Habits) ಮೊತ್ತ. ಈ ವ್ಯಕ್ತಿಭಾಷೆಯಲ್ಲಿ ಏಕರೂಪತೆಯಷ್ಟೇ ಅಲ್ಲದೆ, ಪರಸ್ಪರ ಅರಿವೂ (Mutual Intelligibility) ಇರುತ್ತದೆ. ಆ ಅರಿವಿರುವ ಒಂದೇ ಭಾಷೆಯನ್ನಾಡುವ ವ್ಯಕ್ತಿಗಳ ಸಂಪರ್ಕ ಅಥವಾ ಸಂಸರ್ಗ ಸದಾ ಇರಬೇಕು. ಅದು ವಿರಳವಾದಲ್ಲಿ ಭಾಷೆಯಲ್ಲಿ ಭಿನ್ನತೆ ಅಥವಾ ಗುರುತಿಸಬಹುದಾದಷ್ಟು ಮಟ್ಟಿನ ಬದಲಾವಣೆ ಕಂಡುಬರುತ್ತದೆ. ಈ ಭಾಷಾ ಬದಲಾವಣೆಗಳನ್ನು ಪ್ರಾಂತಭೇದ ಎನ್ನುತ್ತಾರೆ. ಮೂಲ ಅಥವಾ ಪ್ರಧಾನ ಭಾಷೆಯಿಂದ ತುಸು ಭಿನ್ನವಾಗಿ ತಮ್ಮ ತಮ್ಮ ವೈಲಕ್ಷಣ್ಯಗಳನ್ನು ಮೆರೆಯುವುದರಿಂದ ಅವುಗಳನ್ನು 'ಉಪ-ಭಾಷೆ'ಗಳು ಎಂತಲೂ ಕರೆಯುತ್ತಾರೆ.

3.5.1 ಉಪಭಾಷೆ ಅಥವಾ ಪ್ರಾಂತಭೇದಗಳು ಎರಡು ಬಗೆಯವು :

(i) ಪ್ರಾದೇಶಿಕ ಉಪಭಾಷೆಗಳು (Reginal Dialects) (ii) ಸಾಮಾಜಿಕ ಉಪಭಾಷೆಗಳು (Social Dialects)

ಮೂಲತಃ ಇವು ಆಡುನುಡಿಯ ಆಧಾರದಮೇಲೆ ಗುರುತಿಸುವಂಥವುಗಳು. ಗ್ರಂಥಸ್ಥ ಭಾಷೆಯಲ್ಲಿ ಹೆಚ್ಚು ವ್ಯತ್ಯಾಸಗಳಿರುವುದಿಲ್ಲ. ಆದ್ದರಿಂದ ಒಂದು ನಾಡಿನ ಮೂಡ, ಪಡುವ. ತೆಂಕ, ಬಡಗಗಳಲ್ಲಿನ ಜನ ಬೆಳಸಿಕೊಂಡ ವೈಶಿಷ್ಟ್ಯಗಳಿಂದ ಪ್ರಾಂತಭೇದಗಳಾಗುತ್ತವೆ. ಅದೇ ರೀತಿ ಒಂದೊಂದು ಜಾತಿಯ ಜನರು ಸದಾ ಸಂಪರ್ಕ ಪಡೆಯುತ್ತಿರುತ್ತಾರೆ. ಅವರಲ್ಲಿ ಅವರವೇ ಆದ ಭಾಷಾವೈಶಿಷ್ಟ್ಯಗಳು ಬೆಳೆಯುತ್ತವೆ. ಅವು ಸಾಮಾಜಿಕ ಉಪಭಾಷೆಗಳು, ಈ ರೀತಿಯ ಪ್ರಾಂತಭೇದ ಅಥವಾ ಉಪಭಾಷೆಗಳುಂಟಾಗಲು ಮುಖ್ಯ ಕಾರಣಗಳು ಐದು ;

(i) ದೇಶ ವೈಶಾಲ್ಯ
(ii) ಪ್ರಕೃತಿ
(iii) ಸಾಮಾಜಿಕ ಪ್ರಭೇದ
(iv) ರಾಜಕಾರಣ
(v) ಅನ್ಯಭಾಷಾ ಸಂಪರ್ಕ

(i) ಒಂದು ಭಾಷೆಯನ್ನಾಡುವ ಜನರಿರುವ ದೇಶ ತುಂಬಾ ವಿಶಾಲವಾಗಿದ್ದರೆ ಒಂದು ಮೂಲೆಯವರು ಮತ್ತೊಂದು ಮೂಲೆಯವರನ್ನು ಭೇಟಿಯಾಗುವುದು ವಿರಳ. ಹಿಂದಿನ ಕಾಲದಲ್ಲಿ ಸಂಪರ್ಕ ಸಾಧನಗಳು ಕಡಮೆ ಇದ್ದವು. ಜನರ ಬೇಡಿಕೆಗಳಲ್ಲಿ (Wants) ಮಿತಿ ಇತ್ತು. ಅವರು ಇದ್ದೆಡೆಯಲ್ಲೇ ಇದ್ದದ್ದರಲ್ಲೇ ಸ್ವಯಂತೃಪ್ತರಾಗಿರುತ್ತಿದ್ದರು. ಪರಿಸ್ಥಿತಿ ಹಾಗಿದ್ದುದರಿಂದ ಮಾನವ ಸಂಸರ್ಗ ತುಂಬಾ ವಿರಳಗೊಂಡು, ಪ್ರದೇಶಭಾಷೆ ಒಂದೇ ಇದ್ದರೂ ಕೆಲವು ವೈಶಿಷ್ಟ್ಯಗಳು ರೂಪು ಪಡೆಯುವುದು ಸಹಜವಾಗಿತ್ತು. ಅಂತಹ ಪ್ರಾದೇಶಿಕ ವೈಶಿಷ್ಟ್ಯಗಳೇ ಉಪಭಾಷೆಗಳು, ಕರ್ನಾಟಕ ಬಹುದೊಡ್ಡ ದೇಶ. ಅದರ ಉತ್ತರದ ಬೀದರ್ ಭಾಗದವರ ನುಡಿಗೂ, ದಕ್ಷಿಣದ ಕೊಳ್ಳೇಗಾಲದವರಾಡುವ ನುಡಿಗೂ ವ್ಯತ್ಯಾಸ ಇರುವುದು ಸ್ವಾಭಾವಿಕ.

(ii) ಪ್ರಾಂತಭೇದಕ್ಕೆ ಪ್ರಕೃತಿಯೂ ಕಾರಣವಾಗುತ್ತದೆ.ಅಂದರೆ ಒಂದು ಭಾಷೆಯನ್ನಾಡುವ ನಾಡಿನ ಕೆಲವೆಡೆಗಳಲ್ಲಿ ನದಿ ಅಥವಾ ಬೆಟ್ಟ ಅಡ್ಡವಿದ್ದರೆ, ಸೇತುವೆಗಳಾಗಲಿ ಇತರ ಸಂಪರ್ಕ ಸೌಲಭ್ಯಗಳಾಗಲಿ ಅಷ್ಟಾಗಿ ಇಲ್ಲದಿದ್ದರೆ ಸಂಸರ್ಗ ಕಡಮೆ ಆಗಿ ಆ ಇಕ್ಕೆಲಗಳ ಜನರು ಭಾಷಿಕ ವೈಶಿಷ್ಟ್ಯಗಳನ್ನು ಮೆರೆಯುವುದುಂಟು. ಅವು ಉಪಭಾಷೆಯ ಬಿತ್ತುಗಳಾಗುತ್ತಿದ್ದುವು. ಮೈಸೂರು ಭಾಗದಿಂದ ಕರಾವಳಿಯನ್ನು ಬೇರ್ಪಡಿಸಿದ್ದು

ಸಹ್ಯಾದ್ರಿಶ್ರೇಣಿ, ಧಾರವಾಡ ಜಿಲ್ಲೆಯನ್ನು ಪ್ರತ್ಯೇಕಗೊಳಿಸಿದ್ದು ಹರಿ ಹರದ ಬಳಿ ಹರಿವ ತುಂಗಭದ್ರಾನದಿ ಈ ರೀತಿ ಪ್ರಾಂತಭೇದದಲ್ಲಿ ಪ್ರಕೃತಿ ಪ್ರಧಾನಪಾತ್ರ ವಹಿಸುತ್ತದೆ.

(iii) ಸಾಮಾಜಿಕ ಭಾಷಾ ಪ್ರಭೇದಕ್ಕೆ ಜನಾಂಗ ಕಾರಣವಾಗುತ್ತದೆ. ಒಂದೊಂದು ಜಾತಿಯವರಿಗೂ ತಮ್ಮವೇ ಆದ ಆಚಾರ ವಿಚಾರಗಳು, ಮಡಿ ಮೈಲಿಗೆಗಳಿರುತ್ತವೆ. ಅವುಗಳ ಬಳಕೆ ಅವರಿಗೆ ಮಾತ್ರ ಸೀಮಿತ. ಅದೇ ರೀತಿ ಅವರವರಲ್ಲೇ ಮಾತುಕತೆಗಳು ನಡೆಯುವುದರಿಂದ, ಅವು ಅನ್ಯ ಜನಾಂಗದವರ ನುಡಿಗಳಿಂದ ಭಿನ್ನವಾಗುತ್ತವೆ. ಇದಕ್ಕೆ ನೀಲ ಗಿರಿಯ ಬಡಗ, ಉತ್ತರ ಕನ್ನಡ ಜಿಲ್ಲೆಯ ಹವ್ಯಕ, ಬಿಳಿಗಿರಿ ರಂಗನ ಬೆಟ್ಟದ ಸೋಲಿಗರು ಮೊದಲಾದವರ ಭಾಷೆಗಳನ್ನು ಹೆಸರಿಸಬಹುದು. ಅಂತೆಯೇ ಮಂಗಳೂರು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹವ್ಯಕ ಕನ್ನಡ, ಹಾಲಕ್ಕಿಕನ್ನಡ. ಗೌಡಕನ್ನಡ, ಕೊಡಗ ಕನ್ನಡ, ಎಂಬ ಒಳಭೇದಗಳೂ ಉಂಟು. ಇವು ಸಾಮಾಜಿಕ ಉಪಭಾಷೆಗಳು. ಆದರೆ ಭಾಷಾ ವಿಜ್ಞಾನಿ ಗಳು ಸಾಮಾಜಿಕ ಉಪಭಾಷಾ ಪ್ರಭೇದವನ್ನು ಒಪ್ಪುವುದಿಲ್ಲ. ಹೋಸೆ ರೋನ ಎಂಬುವರು 'Social Dialect is a not a dailect at all' ಎಂದು ಒಂದೆಡೆ ಹೇಳಿದ್ದಾನೆ[17]. ಆದರೂ ಸಾಮಾಜಿಕ ಉಪಭಾಷೆ ನಿಜಕ್ಕೂ ಗಣನೀಯವಾದದ್ದು ಎಂಬುದು ನಮ್ಮ ಅಭಿಪ್ರಾಯ.

(iv) **ರಾಜಕಾರಣ :** ಒಂದು ಭಾಷೆಯನ್ನಾಡುವ ಜನರನ್ನು ರಾಜಕೀಯ ಕಾರಣಗಳಿಂದಾಗಿ ಬೇರ್ಪಡಿಸಿ ಬೇರೆ ಬೇರೆ ಭಾಷೆಗಳನ್ನಾಡುವ ಜನರ ಪ್ರದೇಶಗಳಿಗೆ ಸೇರಿಸಿದರೆ ಆ ಪ್ರದೇಶದ ಜನರು ತಮ್ಮ ಕೋರ್ಟು, ಕಚೇರಿ, ವ್ಯಾಪಾರ ವ್ಯವಹಾರಗಳಲ್ಲಿ ವ್ಯವಹರಣೆಯ ಭಾಷೆಯ ಪ್ರಭಾವಕ್ಕೆ ಸಿಕ್ಕು ಕೆಲವು ವೈಶಿಷ್ಟ್ಯಗಳನ್ನು ಬೆಳೆಸಿಕೊಳ್ಳುವುದುಂಟು. ಉದಾಹರಣೆಗೆ : 'ಕಾವೇರಿಯಿಂದಮಾ ಗೋದಾವರಿವರಮಿರ್ದ ಅಖಂಡ ಕರ್ನಾಟಕ' ಕಾಲಕಾಲಕ್ಕೆ ಛಿದ್ರಗೊಳ್ಳುತ್ತಾ ಬಂತು. ಒಡೆದು ಆಳುವ ನೀತಿಯನ್ನೇ ತಮ್ಮ ಜೀವನ ಗುರಿ ಎಂದು ಭಾವಿಸಿ ನಡೆಸಿ ಕೊಳ್ಳುತ್ತಿದ್ದ ಬ್ರಿಟಿಷರು, ಕರ್ನಾಟಕವನ್ನು ಒಡೆದು ಆಂಧ್ರ, ತಮಿಳು ನಾಡು, ಮಹಾರಾಷ್ಟ್ರ ಮೊದಲಾದೆಡೆಗಳಿಗೆ ಹಂಚಿದರು. ಈ ಪ್ರದೇಶ ಗಳ ಕನ್ನಡಿಗರು ಸಹಜವಾಗಿ ತಮ್ಮ ಭಿನ್ನತೆಗಳನ್ನು ಬೆಳೆಸಿಕೊಂಡರು.

---

17 Jose Rona, Method and Theory in linguistics ; Etd, by Paul L. Gravin,

(v) **ಅನ್ಯಭಾಷಾ ಸಂಪರ್ಕ :** ಈ ರೀತಿ ಹರಿಹಂಚಾದ ಕರ್ನಾಟಕದ ಕನ್ನಡಿಗರು ಆಯಾ ಆಡಳಿತ ಭಾಷಾ ಪ್ರದೇಶಗಳಲ್ಲಿದ್ದುಕೊಂಡು ಅವರ ಅನೇಕ ನುಡಿ, ನುಡಿಗಟ್ಟುಗಳನ್ನು ಆಹ್ವಾನಿಸಿ ವೈಶಿಷ್ಟ್ಯಗಳನ್ನು ಮೆರೆದರು. ಬಿಜಾಪುರ, ಬೆಳಗಾವಿ, ಧಾರವಾಡದವರು ಮರಾಠಿ ಪ್ರಭಾವಕ್ಕೆ, ಮಂಗಳೂರವರು ಕೊಂಕಣಿ, ತುಳು ಮತ್ತು ಮಲೆಯಾಳಂ ಗಳ ಪ್ರಭಾವಕ್ಕೆ, ಗುಲ್ಬರ್ಗಾ ಕಡೆಯುವರು ಹೈದರಾಬಾದ್‌ನ ಉರ್ದು ಪ್ರಭಾವಕ್ಕೆ ಒಳಗಾದರು. ಬಳ್ಳಾರಿಯುವರು ಹೆಚ್ಚಾಗಿ ತೆಲುಗು ಪದಗಳನ್ನು ಬೆರಸಿದರು,

ಹೀಗೆ ಪ್ರಾಂತಭೇದಗಳು ಬೀದಿ ಬೀದಿಗೆ, ಕೇರಿ ಕೇರಿಗೆ ಆಗುವುದುಂಟು ಅಷ್ಟೇಕೆ ಒಂದೇ ಮನೆಯಲ್ಲಿ ಮನೆಯ ಕೆಲಸದವರು ಆಡುವ ಭಾಷೆಗೂ, ಮನೆಯವರು ಆಡುವ ಭಾಷೆಗೂ ವ್ಯತ್ಯಾಸ ಉಂಟು.

3.5.2 ಕನ್ನಡ ಭಾಷಾ ಪ್ರಾಂತಭೇದಗಳನ್ನು ಗಮನದಲ್ಲಿಟ್ಟುಕೊಂಡು ಇಂದು ಭಾಷಾ ವಿಜ್ಞಾನಿಗಳು ಪ್ರಧಾನವಾಗಿ ನಾಲ್ಕು ಉಪಭಾಷೆ ಗಳನ್ನು ಗುರುತಿಸಿದ್ದಾರೆ.

(i) ಕಲ್ಯಾಣ ಕನ್ನಡ : (ಗುಲ್ಬರ್ಗಾ, ಬೀದರ್, ರಾಯಚೂರು ವಿಭಾಗಗಳಲ್ಲಿನ ಕನ್ನಡ)

(ii) ಕಿತ್ತೂರು ಕನ್ನಡ : (ಧಾರವಾಡ ಬೆಳಗಾವಿ, ಬಿಜಾಪುರ ವಿಭಾಗಗಳಲ್ಲಿನ ಕನ್ನಡ)

(iii) ಕಾರವಾರ ಕನ್ನಡ : (ಮಂಗಳೂರು, ಉತ್ತರ ಕನ್ನಡ ಜಿಲ್ಲೆಗಳಲ್ಲಿನ ಕನ್ನಡ)

(iv) ಮೈಸೂರು ಕನ್ನಡ : (ಮೈಸೂರು, ಬೆಂಗಳೂರು, ತುಮಕೂರು ಮೊದ ಲಾದೆಡೆಗಳಲ್ಲಿನ ಕನ್ನಡ)

### (i) ಕಲ್ಯಾಣ ಕನ್ನಡ ಅಥವಾ ಗುಲ್ಬರ್ಗಾ ಕನ್ನಡ :

ಹೈದರಾಬಾದಿನೊಡನೆ ಸಂಪರ್ಕ ಬಹಳಕಾಲ ಇದ್ದುದರಿಂದ ಈ ಭಾಗದ ಕನ್ನಡಿಗರು ತಮ್ಮ ಮಾತುಗಳಲ್ಲಿ ಉರ್ದು ಪದಗಳನ್ನು ಸಾಕಷ್ಟು ಬೆರೆಸಿದರು. ಉಸಾಬರಿ, ದೋಸ್ತ್, ಶಿಫಾರಸು, ದುಖಾನ್, ಮುಷ್ಕಲ್, ತಖಲೀಪ್ ಇತ್ಯಾದಿ ಉರ್ದು ಪದಗಳನ್ನೂ ಮಾತಿನಲ್ಲಿ ವಾಕ್‌ರೂಢಿಯಲ್ಲಿ (Mannerism) 'ಕೇಸಿ' ಎಂಬ ಅವ್ಯಯುವನ್ನೂ ಬಳಸುತ್ತಾರೆ. 'ಅಲ್ಲಿಗೋಗಿ ಕೇಸಿ, ಮಾಡಿಕೇಸಿ' ಈ ಬಗೆಯ ನುಡಿ ಧೋರಣೆಗಳುಂಟು. 'ಏನಪಾ ಸಾಹೇಬ್ರುದಾರೇನು ?' ಎಂದು ಕೇಳಿದರೆ ಬರುವ

ಉತ್ತರ, 'ಮ್ಯಾಲ್‌ಹಾರ್ರಿ' (ಮೇಲೆ ಅಹರ್ > ಹಾರ್ = ಇದ್ದಾರೆ) ಎಂದು ಹೀಗೆ ಕೆಲವು ನುಡಿವೈಶಿಷ್ಟ್ಯಗಳುಂಟು.

**(ii) ಕಿತ್ತೂರು ಕನ್ನಡ (ಧಾರವಾಡ ಕನ್ನಡ) :**

ಮೈಸೂರು ಕನ್ನಡಕ್ಕೂ. ಕಿತ್ತೂರು ಕನ್ನಡಕ್ಕೂ ಉಪಭಾಷಾ ಭೇದ ಗುರುತಿಸುವಷ್ಟು ಸ್ಪಷ್ಟ. 'ಏನ್ಲೇ ತಮ್ಮ, ಏನು ಭಯಂಕರ ಐತ್ಲೇ? 'ಅಲ್ಲೋ ಗೌಡ, ಗಡಬಾರೋ' 'ಇರೋ ಮಾರಾಯ ಇಳಿಲೀಕ್ ಹತ್ತೀನಿ' ಇತ್ಯಾದಿ ಪ್ರಾದೇಶಿಕ ಸೊಗಡು ತುಂಬಿದ ನುಡಿ ನುಡಿಯುತ್ತಾರೆ. ಹೆಚ್ಚು ಎಕಾರಕ್ಕೆ ಇಕಾರ ಬಳಸುತ್ತಾರೆ.

ಉದಾಹರಣೆ : ಮನೆ > ಮನಿ, ಬಟ್ಟೆ > ಬಟ್ಟಿ ಇತ್ಯಾದಿ, ಆದರೆ ಮೈಸೂರವರು ಹುಡುಗಿ ಎಂದು 'ಇ' ಕಾರ ಬಳಸಿದರೆ ಅವರು 'ಹುಡಗೆ' ಎಂದು 'ಎ' ಬಳಸುತ್ತಾರೆ. ಆದ್ದರಿಂದ 'ಇ' ಕಾರ ಉತ್ತರ ಕರ್ನಾಟಕಕ್ಕೆ 'ಎ' ಕಾರ ದಕ್ಷಿಣ ಕರ್ನಾಟಕಕ್ಕೆ ಎಂಬ ನಿಯಮವೇನೂ ಇಲ್ಲ.

**(iii) ಕಾರವಾರ ಕನ್ನಡ (ಮಂಗಳೂರು ಕನ್ನಡ) :**

'ಬಾಯಲ್ಲಿ ಎಂಥದುಂಟು ಮಾರಾಯ್ರೆ ಒನ್ಸಾಸು !' 'ಅಲ್ರೀ ಸೋಮೇಶ್ವರ ದಿಂದಲೂ ಪಿರಿಪಿರಿ ಮಳೆ ಮಾರಾಯ್ರ!' 'ಏನು ಸ್ವಾಮಿ ನೀವು ಕೋಂಗ್ರೆಸ್‌ಗೆ ಸೇರಿ ಎಷ್ಟು ವರ್ಷ ಗಳಾದವು ?, 'ನಿಮ್ಮ ಲೋರಿ ಯಾವಾಗ ಬರುವುದುಂಟು ?' ಇತ್ಯಾದಿ ಪ್ರಯೋಗಗಳು ಕಾರವಾರ ಕನ್ನಡದಲ್ಲುಂಟು. ಇದಕ್ಕೆ ಕೊಂಕಣಿ, ತುಳು ಪ್ರಭಾವ ಕಾರಣ. ಕೆಲವು ಅನುನಾಸಿಕೀಕರಣಗಳಿಗೆ ಮಲೆಯಾಳಂ ಪ್ರಭಾವ.

**(iv) ಮೈಸೂರು ಕನ್ನಡ :**

ಇದು ಹಳೇ ಮೈಸೂರಿನ ಜಿಲ್ಲೆಗಳ ಕನ್ನಡ, ಕೆಲವು ಜಿಲ್ಲೆಗಳನ್ನು ಬಿಟ್ಟರೆ ಹೆಚ್ಚು ಜಿಲ್ಲೆಗಳಲ್ಲಿ ಗ್ರಾಂಥಿಕ ಭಾಷೆಯನ್ನಾಡುವುದು ಕಂಡು ಬರುತ್ತದೆ. ಮಂಡ್ಯ ಮೊದಲಾದೆಡೆಗಳಲ್ಲಿ 'ಒಸಿ' 'ಏನ್ಲಾ' 'ಬಾರ್ಲಾ' 'ಯಾಕ್ಲಾ?' 'ಬಡ್ಕೊತ್ತಿದ್ದ' 'ಬುಡ್‌ಬುಡಪ್ಪೋ' ಇತ್ಯಾದಿ ಗ್ರಾಮೀಣ ನುಡಿಗಳುಂಟು.

ಹೀಗೆ ಕನ್ನಡದಲ್ಲಿ ನಾಲ್ಕು ಭೇದಗಳಿವೆ. ಇವೂ ಸಹ ಶಿಕ್ಷಣ, ನಾಗರಿಕತೆ ಎತ್ತು ವಿಶೇಷ ಸಂಸರ್ಗದಿಂದಾಗಿ ಇಂದು ದೂರವಾಗುತ್ತಿವೆ ಎಂದು ಹೇಳಬಹುದು.

## ೬. ಕನ್ನಡ : ಒಂದು ಜೀವಂತ ಭಾಷೆಯಾಗಿ

### 3.6.0. ಬೆಳೆಯುವ ಭಾಷೆಯ ಲಕ್ಷಣಗಳು :—

ಭಾಷೆ ಒಂದು ಜೀವಂತ ನಿರ್ಮಾಣ ; ಭಾವವಾಹಕ ಮಾಧ್ಯಮ, ಬದುಕಿನೊಡನೆ ಅದು ತನ್ನ ಜೈವಿಕ ಸಂಬಂಧವನ್ನು ಸದಾ ಇಟ್ಟುಕೊಂಡೇ ಇರುತ್ತದೆ. ಏಕೆಂದರೆ ಭಾಷೆಗೆ ಸ್ವತಂತ್ರ ಅಸ್ತಿತ್ವ ಅಥವಾ ಸ್ಥಿರತೆ ಇಲ್ಲ. ಅದು ಸದಾ ಮಾನವಾವಲಂಬಿ. ಈ ಅನಿವಾರ್ಯತೆ ಇರುವುದರಿಂದಲೇ ಬದುಕು ಬೆಳೆದಂತೆ ಅಂದರೆ ಬದಲಾದಂತೆ ಭಾಷೆಯೂ ಬೆಳೆಯುತ್ತಾ ಹೋಗುತ್ತದೆ. ಆದರೆ ಭಾಷೆಯ ಬದಲಾವಣೆ ಅಥವಾ ಬೆಳವಣಿಗೆಯ ಗತಿ ತುಂಬಾ ಮಂದ; ತ್ವರಿತ ಅಲ್ಲ. ಆದರೂ ಬದಲಾವಣೆಯೇ ಅದರ ಬೆಳವಣಿಗೆ.

ಭಾಷಾ ಬೆಳವಣಿಗೆ ಅಥವಾ ಬದಲಾವಣೆಗೆಗೆ ಹಲವು ಕಾರಣಗಳಿವೆ.

(i) **ಸೌಲಭ್ಯಾಕಾಂಕ್ಷೆ :**

ಅಲ್ಪಶ್ರಮದಲ್ಲಿ ಹೆಚ್ಚು ಪ್ರಯೋಜನ ಪಡೆಯಬೇಕೆಂಬುದು ಮನುಜ ಸಹಜವಾದ ಗುಣ. ಇದಕ್ಕೆ ಭಾಷೆಯ ದುಡಿಮೆ ಹೊರತಲ್ಲ. ಶ್ರುತಿಕಷ್ಟ (ಕೇಳುವಾಗ ಕಿವಿಗೆ ಕರ್ಕಶವೆನಿಸುವುದು), ಉಚ್ಚಾರ ಕ್ಲಿಷ್ಟ (ಉಚ್ಚರಿಸಲು ಕಷ್ಟಪಡುವುದು)ಗಳನ್ನು ಆದಷ್ಟು ಮಟ್ಟಿಗೆ ದೂರಮಾಡುತ್ತಾನೆ, ಸರಳ ಸುಭಗ, ಸುಲಭ ಪದಗಳನ್ನೇ ಆದಷ್ಟುಮಟ್ಟಿಗೆ ಪ್ರಯೋಗಿಸುತ್ತಾನೆ. ತನ್ನ ಶಕ್ತಿಯನ್ನು ಹೆಚ್ಚು ವ್ಯಯ ಮಾಡಿಕೊಳ್ಳಲಿಚ್ಛಿಸುವುದಿಲ್ಲ. ಇದಕ್ಕೆ ಅವನ ಆಲಸ್ಯ ಪ್ರವೃತ್ತಿ (Laziness) ಕಾರಣವಾಗುತ್ತದೆ ಕೂಡ.

**ಉದಾಹರಣೆಗೆ:**

ಹಳಗನ್ನಡದ 'ಗಱ್ದೆ' ಯನ್ನು 'ಗದ್ದೆ' ಎಂತಲೂ, 'ಉರ್ದು' ವನ್ನು 'ಉದ್ದು' ಎಂತಲೂ ತನ್ನ ಸೌಲಭ್ಯಕ್ಕಾಗಿ ವಿಜಾತೀಯ ವರ್ಣಗಳ ಉಚ್ಚಾರಣಾಕ್ಲೇಶ ನಿವಾರಣೆ ಮಾಡಿಕೊಂಡು ಸಜಾತೀಯ ದ್ವಿತ್ವಾಕ್ಷರಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತಾನೆ.

ಕೆಲವು ವೇಳೆ, ದ್ವಿತ್ವಾಕ್ಷರಗಳನ್ನು ಸರಳೀಕರಿಸಿಕೊಂಡು ಅಥವಾ ವಿರಳಗೊಳಿಸಿಕೊಂಡು ಬಟಿಲ್ಕೆ> ಬಳಲಿಕೆ, ಪೊಗಟ್ಕೆ> ಪೊಗಳಿಕೆ ಎಂದು ಉಚ್ಚರಿಸುವುದುಂಟು.

ಮತ್ತೆ ಕೆಲವು ವೇಳೆ, ಸಂಗ್ರಹಿಸಿ ಹೇಳುವುದೂ ಉಂಟು.

**ಉದಾಹರಣೆಗೆ :**

ನೀನು ಬರುತ್ತೀಯಾ ?> ಬತ್ತೀಯಾ ? ಕುಳಿತುಕೊ> ಕುಂತ್ಕೊ, ಇತ್ಯಾದಿ.

ಈ ಬಗೆಯ ವರ್ಕ್ಯವಿನ ಉಚ್ಚಾರ ಸೌಲಭ್ಯ ಭಾಷಾವ್ಯತ್ಯಾಸಕ್ಕೊಂದು ಕಾರಣವಾಗುತ್ತದೆ.

### 3,6.2 (ii) ಅನ್ಯಭಾಷಾ ಸಂಸರ್ಗ :—

'ನೀನು ಮೂಗು ಹಾಯಿಸಿಕೊಂಡು ಬರಬೇಡ' ಎನ್ನುತ್ತೇವೆ. ಇದು ಕನ್ನಡದಿಂದ ಇಂಗ್ಲಿಷಿಗೆ ಹೋಗಿ Don't poke your nose ಎಂದಾಗಿದೆ. ಅದೇರೀತಿ ತಮಿಳಿನ ಅರಸಿ (ಅಕ್ಕಿ)> ರಿಸಿ> ರೈಸ್ ಆಗಿದೆ ಇಂಗ್ಲಿಷ್‌ನಲ್ಲಿ. ಇಂಗ್ಲಿಷಿನ Guilt ಕನ್ನಡದಲ್ಲಿ ಗಿಲೀಟು ಆಗಿದೆ. ನಮ್ಮ ದೇಶದ್ದಲ್ಲದ ವಸ್ತು 'ಸೀಮೆ' ಎಂಬ ಪೂರ್ವ ಪ್ರತ್ಯಯ ಹಚ್ಚಿಸಿಕೊಂಡ ಸೀಮೆ + ಎಣ್ಣೆ = ಸೀಮೆಎಣ್ಣೆ, ಸೀಮೆಹಸು, ಸೀಮೆಸುಣ್ಣ, ಸೀಮೆಬದನೆ, ಸೀಮೆಮುಳ್ಳು, ಸೀಮೆ ಅಂಟು (ಸಿಮೆಂಟು), ಸೀಮೆ ನಾಯಿ ಇತ್ಯಾದಿ ಪದಗಳನ್ನು ಸೃಷ್ಟಿಸಿಕೊಳ್ಳುತ್ತದೆ.

### 3.6.3 (iii) ಪ್ರಭಾವಶಾಲೀ ವ್ಯಕ್ತಿಗಳಿಂದ :

ಬಸವಣ್ಣ ಕಾಯಕ, ದಾಸೋಹ ಪದಗಳನ್ನೂ ಗಾಂಧೀಜಿ ಸತ್ಯಾಗ್ರಹ, ಹರಿಜನ ಇತ್ಯಾದಿ ಪದಗಳನ್ನೂ ಬಳಸಿದರು. ಕುವೆಂಪು ಶ್ರೀ ಸಾಮಾನ್ಯ ಬಳಸಿದರು. ಇಂತಹ ವ್ಯಕ್ತಿರತ ಶಬ್ದಗಳು ಅವರ ಪ್ರಯೋಗ ಪ್ರಭಾವದಿಂದಾಗಿ ಸಮೂಹಗತ ಪದಗಳಾಗುತ್ತವೆ.

ಇಂಗ್ಲಿಷಿನ 'Quiz' ಪದ. ಐರ್ಲೆಂಡಿನ ಡಬ್ಲಿನ್‌ನ ರಂಗಭೂಮಿಯೊಂದರ ಮ್ಯಾನೇಜರ್ ಜೇಮ್ಸ್‌ಡ್ಯಾಲಿ ಎಂಬುವನು ಒಮ್ಮೆ ತನ್ನ ಸ್ನೇಹಿತನ ಸಂಗಡ ಮಾತನಾಡುತ್ತಾ, "ನಾನು ಒಂದು ಹೊಸ ಶಬ್ದವನ್ನು ಸೃಷ್ಟಿಸಿ ಡಬ್ಲಿನ್ ಜನರ ನಡುವೆ ತೇಲಿಬಿಡುತ್ತೇನೆ. ಅದು ಕೇವಲ ಒಂದಿರುಳಿನಲ್ಲಿ ಜನಪ್ರಿಯಗೊಳ್ಳುವಂತೆ ಮಾಡುತ್ತೇನೆ" ಎಂದು ಪಂಥಕಟ್ಟಿದನಂತೆ, ಅದರ ಮೇರೆಗೆ ಅಂದುರಾತ್ರಿ ಸಣ ಮಕ್ಕಳನೇಕರನ್ನು (ಹುಡುಗ ಹುಡುಗಿಯರನ್ನು) ಕರೆದು 'Quiz' ಎಂಬ ಪದವನ್ನು

ವಾಸದ ಮನೆಗಳು, ಕಚೇರಿಗಳು, ಶಾಲೆಗಳು, ಕಾರ್ಖಾನೆಗಳು, ಅಂಗಡಿಗಳು, ಮಳಿಗೆಗಳು, ಎಲ್ಲೆಂದರಲ್ಲಿ ಎಲ್ಲ ಗೋಡೆಗಳ ಮೇಲೆ ಬರೆಯುವಂತೆ ಹೇಳಿದನಂತೆ. ರಾತ್ರಿ ಅವನಾಜ್ಞೆ ನೇರವೇರಿತು. ಬೆಳಗ್ಗೆ ಜನರು ಎದ್ದು ಎಲ್ಲಿ ನೋಡಿದರಲ್ಲಿ 'Quiz', ಶಬ್ದ ರಚನೆಯೆ ! ನೋಡಿದವರೆಲ್ಲಾ ಆಶ್ಚರ್ಯಚಕಿತರಾಗಿ ಅದರ ಅರ್ಥ ಏನೆಂದು ಒಬ್ಬರನ್ನೊಬ್ಬರು ಪ್ರಶ್ನಿಸಹತ್ತಿದರು. ಆದರೆ ಯಾರಿಂದಲೂ ಉತ್ತರ ಸಿಗಲಿಲ್ಲ. ಕಾರಣ ಯರಾರಿಗೂ ಆ ಶಬ್ದದ ಅರ್ಥ ತಿಳಿದಿರಲಿಲ್ಲ. ಅಷ್ಟೇಕೆ ಅದನ್ನು ಆವಿಷ್ಕರಿಸಿದ ಡ್ಯಾಲಿಗೆ ಗೊತ್ತಿರಲಿಲ್ಲ. ಡಬ್ಲಿನ್ ಜನತೆಯ ಜಾಣ್ಮೆಯ ಮೇಲೆ ಪ್ರಯೋಗಿಸಿದ ಜೇಮ್ಸ್ ಡ್ಯಾಲಿಯ 'Quiz' ಎಷ್ಟೋ ದಿನಗಳಾದ ಮೇಲೆ 'ವ್ಯಕ್ತಿಯ ಜಾಣತನ ಪರೀಕ್ಷೆ' ಎಂಬರ್ಥ ತಳೆಯಿತಂತೆ[18] ! ಹೀಗೆ ಒಬ್ಬ ವ್ಯಕ್ತಿ ಜನತೆಯ ಮಧ್ಯೆ ಹರಿಯಬಿಟ್ಟ ಪದ ಅರ್ಥ ಪಡೆಯುವುದೂ ಉಂಟು.

### 3.6.4 iv ಸಮೂಹ ಮಾಧ್ಯಮಗಳು :

ಟಿ.ವಿ., ರೇಡಿಯೊ ಮತ್ತು ವೃತ್ತಪತ್ರಿಕೆಗಳು ಭಾಷೆಯ ಬೆಳವಣಿಗೆಗೆ ಸಹಾಯ ಮಾಡುತ್ತವೆ. ಅವು ಸೃಷ್ಟಿಸಿದ ಪದಗಳು ಬಹುಬೇಗ ಚಲಾವಣೆಗೆ ಬಂದುಬಿಡುತ್ತವೆ.

**ಉದಾಹರಣೆಗೆ :**

ಕನ್ನಡಪ್ರಭ ಪತ್ರಿಕೆಯು corruption ಎಂಬುದಕ್ಕೆ 'ಭ್ರಷ್ಟಾಚಾರ' ಎಂಬ ಪದ ಬಳಸಿತು. ಇಡೀ ಭರತಖಂಡದಲ್ಲಿ ಅದು ತುಂಬು ಚಾಲ್ತಿಯಲ್ಲಿದೆ ಇಂದು, ಹೀಗೆಯೇ ಭಯೋತ್ಪಾದಕರು, ಶ್ವೇತಪತ್ರ ಇತ್ಯಾದಿ ಪದಗಳು ರೂಢಿಗೆ ಬಂದಿವೆ.

ಭಾಷೆಯ ಬೆಳವಣಿಗೆ ಸಂದರ್ಭದಲ್ಲಿ ಬದಲಾವಣೆಗಳು ಅನಿವಾರ್ಯ. ಸ್ಥೂಲ ದೃಷ್ಟಿಗೆ ಭಾಷಾಬೆಳವಣಿಗೆ ಎರಡು ರೂಪದ್ದು. ಒಂದು ಭಾಷಾ ವ್ಯತ್ಯಾಸ, ಮತ್ತೊಂದು ಭಾಷಾ ಸ್ವೀಕರಣ. ಅದು ಆಂತರಿಕ, ಇದು ಬಾಹ್ಯ. ಆಂತರಿಕವು ಸ್ವರೂಪ ವ್ಯತ್ಯಾಸದಿಂದ ಸಿದ್ಧಿಸಿದರೆ, ಬಾಹ್ಯವು ಅನ್ಯಭಾಷಾ ಸ್ವೀಕರಣದಿಂದ ವೃದ್ಧಿಸುತ್ತದೆ.

### 3.6.5 1. ಭಾಷಾ ವ್ಯತ್ಯಾಸ :

ಇದರಲ್ಲಿ ಸ್ಥೂಲವಾಗಿ ಎರಡು ರೂಪಗಳಿವೆ;

---

18 ನೋಡಿ : Know your English, by K. Subramaniyan, THE HINDU, Tuesday, July 14, 1992.

(i) ಧ್ವನಿ ವ್ಯತ್ಯಾಸ (Phonotic change)

(ii) ಅರ್ಥ ವ್ಯತ್ಯಾಸ (Semantic change)

## (೧) ಧ್ವನಿ ವ್ಯತ್ಯಾಸಗಳು (Phonetic changes) ;

ಶಬ್ದಗಳಲ್ಲಿನ ಧ್ವನಿ ಬಿಟ್ಟು ಹೋಗುವುದು ಇಲ್ಲವೇ ಹೊಸದಾಗಿ ಬಂದು ಸೇರುವುದು ಧ್ವನಿವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಅದರಲ್ಲಿ ಹಲವು ರೂಪಗಳಿವೆ.

(i) ಮಿತವ್ಯಯಾಸಕ್ತಿ (Economy) : ಸೌಲಭ್ಯಾಕಾಂಕ್ಷೆ ಮಾನವ ಸಹಜ ಪ್ರವೃತ್ತಿ, ಅದರ ಪರಿಣಾಮವಾಗಿ :
(ಅ) ಶಬ್ದಾರಂಭದಲ್ಲಿ ಎರಡು ವ್ಯಂಜನಗಳಿದ್ದರೆ ಒಂದನ್ನು ಬಿಡುವುದು.

ಉದಾಹರಣೆಗೆ :

'ಸ್ನೇಹ'—ಈ ಪದದ ಆದಿಯಲ್ಲಿನ ದ್ವಿತ್ವಾಕ್ಷರದಲ್ಲಿ 'ಸ್+ನ್+ಏ' ಧ್ವನಿವಾಗಳಿವೆ. ಇದು ತದ್ಭವವಾದಾಗ 'ನೇಹ' ಎಂದಾಗುತ್ತದೆ. ಅಂತಾದಾಗ ಮೊದಲ ‹ಸ, ಎಂಬ ವ್ಯಂಜನ ಲೋಪ ಸಹಜವಾಗಿ ಆಗುತ್ತದೆ.

(ಆ) ಎರಡು ಭಿನ್ನ ಶಬ್ದಗಳಿದ್ದರೆ ಕೂಡಿಸಿ ಉಚ್ಚರಿಸುವುದು,

ಉದಾಹರಣೆಗೆ : ಆವಿಧವಾ > ಅಯಿದೆ > ಐದೆ

ಅಪುದು > ಹೌದು

(ಇ) ನಾಮಪದಗಳು ದೀರ್ಘವಾಗಿದ್ದರೆ ಸಂಗ್ರಹಿಸಿ ನುಡಿಯುವುದು

ಉದಾಹರಣೆಗೆ : ವೆಂಕಟೇಶ—ವೆಂಕ

ಸುಬ್ರಹ್ಮಣ್ಯ—ಸುಬ್ಬ

ನಾರಾಯಣ—ನಾಣಿ

ಇವು ಇಂದು ಸಹಜವೋ ಎನ್ನುವಷ್ಟರಮಟ್ಟಿಗೆ ರೂಢಿಗೆ ಬಂದು ಬಿಟ್ಟಿವೆ.

(ii) ಸದೃಶಾಕ್ಷರ ಲೋಪ (Haplology) : ಒಂದು ಪದದಲ್ಲಿ ಎರಡು ಸದೃಶಾಕ್ಷರಗಳು ಬಂದರೆ ಅವುಗಳಲ್ಲಿ ಒಂದು ಲೋಪವಾಗುವುದುಂಟು.

ಉದಾಹರಣೆಗೆ : ವೀರರಾಜ ಪೇಟೆ> ವಿರಾಜಪೇಟೆ

(iii) ಸ್ವರಾದಿ ಪ್ರಯೋಗ (Prosthesis) : ಶಬ್ದದ ಆದಿವರ್ಣ ದ್ವಿತ್ವವಾಗಿದ್ದರೆ ಸಾಮಾನ್ಯವಾಗಿ ದ್ರಾವಿಡಭಾಷಾ ಜಾಯಮಾನಕ್ಕನುಗುಣವಾಗಿ

ಇಲ್ಲವೇ ಉಚ್ಚಾರಣಾ ಸೌಲಭ್ಯಕ್ಕಾಗಿ ಆದಿವ್ಯಂಜನದ ಹಿಂದೆ ಒಂದು ಸ್ವರವನ್ನು ಸೇರಿಸಿ ಉಚ್ಚರಿಸುವುದುಂಟು.

**ಉದಾಹರಣೆಗೆ :**

ರಾಜನ್ ಎಂಬುದನ್ನು ತಮಿಳರು ಅರಜನ್ (ಅರಸನ್—ಅರಸ) ಎಂದರು ರಾಮನ್ ಎಂಬುದನ್ನು ಇರಾಮನ್ ಎಂದರು. ಲೋಕ—ಉಲೋಕಂ (ಉಲಗಂ) ಎಂದಾಯಿತು. ಕನ್ನಡದಲ್ಲಿ ಸ್ಕೂಲ್—ಇಸ್ಕೂಲ್, ಸ್ಟೇಡ್ಸ್—ಇಸ್ಟೀಟು ಆಯಿತು.

(iv) ಪರಿಹಾರ ದೀರ್ಘೀಕರಣ (Compensatory Lenthening) : ಪದದ ಒಂದು ವ್ಯಂಜನ ಲೋಪವಾದರೆ ಅದಕ್ಕೆ ಬದಲು ಇರುವ ವ್ಯಂಜನವೇ ದೀರ್ಘವಾಗುತ್ತದೆ.

ಉದಾಹರಣೆಗೆ : ಚರ್ಮಪಟ್ಟಿಕಾ > ಚಮ್ಮಟಿಗೆ> ಚಾವಟಿ > ಚಾಟಿ, ಮಯಣ> ಮೇಣ.

(v) ಸ್ವರಭಕ್ತಿ (Anaptysis) : ದೀರ್ಘಾಕ್ಷರಗಳನ್ನು ಬಿಡಿಸಿ, ನಡುವಣ ವ್ಯಂಜನಕ್ಕೆ ಸ್ವರವನ್ನು ಹಚ್ಚುವುದು.

ಉದಾಹರಣೆಗೆ : ವರ್ಷ> ವರುಷ, ಹರ್ಷ> ಹರುಷ ಇತ್ಯಾದಿ.

(vi) ಅಕ್ಷರ ಪಲ್ಲಟ(Metathesis) : ಕೆಲವೊಮ್ಮೆ ಉಚ್ಚಾರಣೆಯ ಸಂದರ್ಭದಲ್ಲಿ ಸ್ವರಗಳಾಗಲಿ, ವ್ಯಂಜನಗಳಾಗಲಿ ಸ್ಥಾನಪಲ್ಲಟಗೊಳ್ಳುತ್ತವೆ.

ಉದಾಹರಣೆಗೆ : ಅಸಗ > ಅಗಸ, ಕಾಗದ > ಕಾದಗ, ಇತ್ಯಾದಿ.

(vii) ದ್ವಿರುಕ್ತಿ (Tantalogy) : ಒಂದೇ ಅರ್ಥದ ಎರಡು ಶಬ್ದಗಳನ್ನು ಏಕಕಾಲದಲ್ಲಿ ಪ್ರಯೋಗಿಸುವುದುಂಟು.

ಉದಾಹರಣೆಗೆ : ಕೂಡಲ ಸಂಗಮ (ಇದರಲ್ಲಿ ಕೂಡಲ ಮತ್ತು ಸಂಗಮ ಎರಡರ ಅರ್ಥವೂ ಒಂದೇ. ಇದು ದ್ವಿರುಕ್ತಿ). ಹಣ್ಣು ಹಂಪಲು (ಇದರಲ್ಲಿ ಹಣ್ಣು + ಹಣ್ಣು + ಫಲ ಎಂಬ ಮೂರು ಶಬ್ದಗಳಿವೆ. ಮೂರರ ಅರ್ಥವೂ ಒಂದೇ. ಇದು ತ್ರಿರುಕ್ತಿ !)

(viii) ತಪ್ಪು ಸಾಹಚರ್ಯ (False Association) : ಅನ್ಯಭಾಷಾ ಶಬ್ದಗಳನ್ನು ಸರಿಯಾಗಿ ಗ್ರಹಿಸದೆ ಅನೇಕ ವೇಳೆ ತಪ್ಪಾಗಿ ಉಚ್ಚರಿಸುತ್ತೇವೆ.

ಉದಾಹರಣೆಗೆ : ಜನ್ಮ...ಜಲ್ಮ ಇತ್ಯಾದಿ.

(ix) ಭಾಷಾಗೌರವ (Euphemism) : ಕೆಲವುವೇಳೆ ಭಾಷಾಗೌರವಕ್ಕಾಗಿ ಅಮಂಗಲವನ್ನು ಆಲಂಕಾರಿಕವಾಗಿ ಹೇಳುತ್ತೇವೆ.

ಉದಾಹರಣೆಗೆ : ಸತ್ತನು ಎಂಬುದನ್ನು, ದಿವಂಗತನಾದನು, ಕೈಲಾಸವಾಸಿಯಾದನು, ಶಿವೈಕ್ಯನಾದನು, ವೈಕುಂಠವಾಸಿಯಾದನು, ಜಿನನಾದನು ಇತ್ಯಾದಿ.

### 3.6.6. ಅರ್ಥ ವ್ಯತ್ಯಾಸಗಳು (Semantic changes) ;

ಒಂದು ಪದದ ಅರ್ಥ ಸಂಕುಚಿತ ಅಥವಾ ವಿಕಾಸಗೊಳ್ಳುವುದು ಅರ್ಥವ್ಯತ್ಯಾಸ ಹೇತು. ಸಾಮಾನ್ಯವಾಗಿ ಒಂದು ಭಾಷೆಯಲ್ಲಿ ಒಂದು ಪದಕ್ಕಿದ್ದ ಅರ್ಥವು ಕಾಲಾಂತರದಲ್ಲಿ ವ್ಯತ್ಯಾಸವಾಗುತ್ತದೆ.

ಉದಾಹರಣೆಗೆ ; ಹಳಗನ್ನಡದಲ್ಲಿ 'ಅಮ್ಮ' ಎಂದರೆ ಅಪ್ಪ ; ಹೊಸಗನ್ನಡದಲ್ಲಿ ಅದರ ಅರ್ಥ 'ತಾಯಿ' ಎಂದಾಯಿತು. ಇಂಗ್ಲಿಷ್‌ನಲ್ಲಿ 'wife' ಎಂದರೆ 'ಸ್ತ್ರೀ'—ಅದು ಕಾಲಕ್ರಮೇಣ 'ಹೆಂಡತಿ' ಎಂಬ ಅರ್ಥಕೊಟ್ಟಿತು.

ಒಂದೇ ಭಾಷೆಯಲ್ಲಿನ ಒಂದು ಶಬ್ದ ಎರಡು ಪ್ರದೇಶಗಳ ಬಳಕೆಯಲ್ಲಿ ಎರಡು ಅರ್ಥ ಕೊಡುವುದುಂಟು.

ಉದಾಹರಣೆಗೆ ; 'ತಿಂಡಿ' ಕಿತ್ತೂರು ಕರ್ನಾಟಕದವರಿಗೆ 'ನವೆ' (ಕೆರೆತ) ಆದರೆ ಮೈಸೂರು ಕರ್ನಾಟಕದವರಿಗೆ 'ತಿನಿಸು' (ತಿನ್ನುವ ಪದಾರ್ಥ) ಎಂಬರ್ಥ ಕೊಡುತ್ತದೆ. ಅದೇ ರೀತಿ 'ಭಯಂಕರ' ಎನ್ನುವುದು ಅವರಲ್ಲಿ 'ಸುಂದರ' ಇವರಲ್ಲಿ 'ಭಯಾನಕ'.

ಈ ಬಗೆಯ ಅರ್ಥ ವ್ಯತ್ಯಾಸಕ್ಕೆ ಹಲವು ಕಾರಣಗಳಿವೆ, ಮುಖ್ಯವಾಗಿ ;

(i) ಅರ್ಥ ಸಂಕೋಚ (Contraction)

(ii) ಅರ್ಥ ವಿಕಾಸ (Expansion)

(iii) ಹೀನಾರ್ಥ ಪ್ರಾಪ್ತಿ (Degeneration)

(iv) ಉತ್ತಮಾರ್ಥ ಪ್ರಾಪ್ತಿ (Elevation)

(v) ಅರ್ಥಾಂತರ (Transference)

(i) **ಅರ್ಥ ಸಂಕೋಚ :** ಒಂದು ಶಬ್ದದ ಮೂಲಾರ್ಥ ವಿಶಾಲವಿದ್ದು ಕಾಲಾಂತರದಲ್ಲಿ ಅದು ಸಂಕುಚಿತಗೊಳ್ಳಬಹುದು.

ಉದಾಹರಣೆಗೆ : 'ಒಡವೆ' ಇದರ ಮೂಲಾರ್ಥ ಒಬ್ಬ ವ್ಯಕ್ತಿಯ ಸಕಲ ಸಂಪತ್ತು. ಆಸ್ತಿ–ಪಾಸ್ತಿ, ಮನೆ–ಮಠ ಎಲ್ಲಸೇರಿ 'ಒಡವೆ' ; ಅಂದರೆ ವ್ಯಕ್ತಿಯ ಒಡೆತನಕ್ಕೆ ಸೇರಿದ್ದು ಎಂಬರ್ಥ ಪಡೆದಿತ್ತು. ಕಾಲಕ್ರಮೇಣ ಅದು ಚಿನ್ನ-ಬೆಳ್ಳಿಯಿಂದ ಮಾಡಿದ 'ಆಭರಣ' ಎಂಬರ್ಥಕ್ಕೆ ಬಂತು.

ಸಂಸ್ಕೃತದ ಚೀರಾ ತದ್ಭವಗೊಂಡು ಕನ್ನಡದಲ್ಲಿ ಸೀರೆ ಎಂದಾಗಿದೆ. ಮೂಲಾರ್ಥ 'ಬಟ್ಟೆ' ಎಂದು. ಅದು ಅರ್ಥ ಸಂಕುಚಿತಗೊಳಿಸಿಕೊಂಡು ಮಹಿಳೆಯರು ಉಡುವ ಬಟ್ಟೆ ಮಾತ್ರ ಆಗಿದೆ.

(ii) **ಅರ್ಥವಿಕಾಸ :** ಒಂದು ಶಬ್ದದ ಮೂಲಾರ್ಥ ಚಿಕ್ಕದಿದ್ದು ಕಾಲಾಂತರದಲ್ಲಿ ಅದು ವಿಕಾಸಗೊಂಡರೆ ಅದನ್ನು ಅರ್ಥವಿಕಾಸ ಎಂದು ಕರೆಯುತ್ತಾರೆ.

ಉದಾಹರಣೆಗೆ : 'ಓಲೆ' ಹಿಂದೆ ಓಲೆಗರಿಯನ್ನು ಕಿವಿಯ ಆಭರಣವಾಗಿ ಬಳಸುತ್ತಿದ್ದರು. ಬೆಂಡನ್ನೂ ಕಿವಿಯ ಆಲೆಯಲ್ಲಿ ರಂಧ್ರಮಾಡಿ ಇಡುತಿದ್ದುದುಂಟು. ಕ್ರಮೇಣ ಚಿನ್ನದಿಂದ ಮಾಡಿದ ಆಭರಣಗಳು ಬಂದವು. ಆದರೆ ಹಿಂದಿನ ಪದ ಬೆಂಡೋಲೆ (ಬೆಂಡು+ಓಲೆ) ಆಯಿತು. ಅದು ಹರಳಿನ ಬೆಂಡೋಲೆ, ವಜ್ರದ ಬೆಂಡೋಲೆ, ಮುತ್ತಿನ ಬೆಂಡೋಲೆ ಇತ್ಯಾದಿ ಬಹುರೂಪು ಪಡೆಯಿತು.

(iii) **ಹೀನಾರ್ಥ ಪ್ರಾಪ್ತಿ :** ಮೂಲಾರ್ಥ ಒಳ್ಳೆಯದಿದ್ದು ಬಳಕೆಯಲ್ಲಿ ಕೆಟ್ಟ ಅರ್ಥ ಬಂದರೆ ಅದು ಹೀನಾರ್ಥಪ್ರಾಪ್ತಿ ಎನ್ನಿಸಿಕೊಳುತ್ತದೆ.

ಉದಾಹರಣೆಗೆ : ಕೂಳು, ಮೂಲಾರ್ಥ 'ಅನ್ನ'. ರೂಢಿಯಲ್ಲಿ ಸತ್ತವರ ಮನೆಯಲ್ಲಿ ತಿನ್ನುವ ಅನ್ನ ಎಂದಾಯಿತು. ಕಾಂಗ್ರೆಸ್ ಎಂಬುದು ತನ್ನ ಪವಿತ್ರಾರ್ಥವನ್ನು ಕಳೆದುಕೊಂಡು ಇಂದು 'ಕೆಟ್ಟ ರಾಜಕೀಯ' ಎಂಬ ಹೀನಾರ್ಥ ಪಡೆದಿದೆ.

(iv) **ಉತ್ತಮಾರ್ಥ ಪ್ರಾಪ್ತಿ :** ಒಂದು ಕಾಲದಲ್ಲಿ ಒಂದು ಪದಕ್ಕಿದ್ದ ಹೀನಾರ್ಥ ಕಾಲಾಂತರದಲ್ಲಿ ಉತ್ತಮಶಾರ್ಥ ಪಡೆಯುವುದು.

ಉದಾಹರಣೆಗೆ : ಇಂಗ್ಲಿಷಿನ Minister, ಮೂಲಾರ್ಥ 'ಸೇವಕ' ಇಂದಿನ ಅರ್ಥ ನಾಡಾಳುವ ಮೇಧಾವಿ ಮಾನವ, ಸಚಿವ ಎಂದು.

(v) **ಅರ್ಥಾಂತರ ;** ಬೇರೆ ಭಾಷೆಯಿಂದ ಪಡೆದ ಶಬ್ದಗಳ ಮೂಲಾರ್ಥ ಮಾಯುವಾಗಿ ಸ್ವೀಕರಿಸಿದ ಭಾಷೆಯಲ್ಲಿ ಬೇರೊಂದು ಅರ್ಥ ಕೊಡುವುದು.

ಉದಾಹರಣೆಗೆ : ಪೆದ್ದ, ಇದು ತೆಲುಗಿನಿಂದ ಕನ್ನಡಕ್ಕೆ ಬಂದ ಪದ, ಮೂಲಾರ್ಥ 'ದೊಡ್ಡವನು' ಕನ್ನಡ ಬಳಕೆಯ ಅರ್ಥ 'ದಡ್ಡ'. ಸಂಸ್ಕೃತದ 'ವಿಪರೀತ' ಮೂಲಾರ್ಥ 'ತಲೆಕೆಳಗು' ಅಥವಾ 'ಹಿಂದುಮುಂದು'. ಕನ್ನಡದಲ್ಲಿ 'ಹೆಚ್ಚು', 'ಅವಸರ'ದ ಮೂಲಾರ್ಥ 'ಸಮಯ' ಅಥವಾ 'ಸಂದರ್ಭ' ಕನ್ನಡದಲ್ಲಿ 'ಆತುರ'.

ಇದೇ ಸ್ಥಿತಿ ಕೆಲವು ತದ್ಭವಗಳಿಗೂ ಆಗಿರುವುದುಂಟು.

ಉದಾಹರಣೆಗೆ ;

| | | | | |
|---|---|---|---|---|
| ಸಂಸ್ಥೆ | (ತ್ಸ) | .... | ಸಂತೆ | (ತ್ಭ) |
| ಯಾತ್ರೆ | (ತ್ಸ) | ... | ಜಾತ್ರೆ | (ತ್ಭ) |
| ಬಿಲ್ವಪತ್ರ | (ತ್ಸ) | .... | ಬೆಲ್ಲವತ್ತ | (ತ್ಭ) |
| ದೈವ | (ತ್ಸ) | .... | ದೆವ್ವ | (ತ್ಭ) |
| ತಾಂಬೂಲ | (ತ್ಸ) | .... | ತಂಬುಲ | (ತ್ಭ) |

ಹೀಗೆ ಸ್ವೀಕರಣದಲ್ಲಿ ಬದಲಾವಣೆ+ಹಾಗೂ ಕಾಲಕಾಲದ ಭಾಷಾ ಸ್ಥಿತ್ಯಂತರತೆಯನ್ನು ಭಾಷಾವ್ಯತ್ಯಾಸ, ಅರ್ಥವ್ಯತ್ಯಾಸ ಎಂದು ಕರೆಯುತ್ತಾರೆ. ಆ ಬಗೆಯ ಬದಲಾವಣೆಯೇ ಭಾಷೆಯ ಬೆಳವಣಿಗೆ.

### 3.6.3. ಭಾಷಾ ಸ್ವೀಕರಣ (Language Borrowing) ;

ಕನ್ನಡ ಒಂದು ಜೀವಂತ ಭಾಷೆ. ಸಮೃದ್ಧ ಸಾಹಿತ್ಯ ಶ್ರೀಮಂತಿಕೆಯನ್ನು ಪಡೆದಿರುವ ಭಾಷೆ. ಅದಕ್ಕೆ ಸಾಕ್ಷಿಯಾಗಿ ಕಾಲಕಾಲಕ್ಕೂ ಅದು ಅನ್ಯ ಭಾಷೆಗಳನ್ನು ತಿಂದು ಜೀರ್ಣಿಸಿಕೊಂಡಿದೆ. 'If a language wants to develop, it should eat and digest other languages' ಎಂಬುದು ನಿಯಮ. ಹಾಗೆ ತಿನ್ನಲಾಗದ, ತಿಂದದ್ದನ್ನು ಜೀರ್ಣಿಸಿಕೊಳ್ಳಲಾಗದ ಭಾಷೆ ಬಹುಬೇಗ ಮೃತಿಯನ್ನೈದುತ್ತದೆ. ಒಳ್ಳೆಯ ಜೀರ್ಣಶಕ್ತಿಯನ್ನುಳ್ಳ ಕನ್ನಡ ಅನ್ಯಭಾಷೆಗಳನ್ನು ಸಾಕಷ್ಟು ಪ್ರಮಾಣದಲ್ಲಿ ತಿಂದು ಜೀರ್ಣಿಸಿಕೊಂಡಿದೆ.

### 3.6.8 (ಅ) ಸಂಸ್ಕೃತ ಮತ್ತು ಪ್ರಾಕೃತ ಭಾಷಾ ಶಬ್ದಗಳು :

ಮೂಲ ದ್ರಾವಿಡದಿಂದ ಬಿಡಿಸಿಕೊಂಡು ಕನ್ನಡ ಸ್ವತಂತ್ರ ಅಸ್ತಿತ್ವವನ್ನು ತಳೆದ ತಾರುಣ್ಯದಲ್ಲೇ ಸಂಸ್ಕೃತದೊಡನೆ ತೆಕ್ಕೆಬಿದ್ದಿತು. ಅಂದರೆ ತನ್ನ ಶಬ್ದಕೋಶವನ್ನು ಹೆಚ್ಚಿಸಿಕೊಳ್ಳಲು ಸಾಕಷ್ಟು ಪದಗಳನ್ನು ಸಂಸ್ಕೃತದಿಂದ ಧಾರಾಳವಾಗಿ ತೆಗೆದುಕೊಂಡಿತು. ಆ ಯುಗಕ್ಕಾಗಲೆ ಶ್ರೀಮಂತ ಭಾಷೆಯಾಗಿದ್ದ ಸಂಸ್ಕೃತ ಉದಾರ

ದಾನಮಾಡಿ ಕನ್ನಡವನ್ನು ಪೋಷಿಸಿ ರಕ್ಷಿಸಿತು. ಹಡೆದ ತಾಯಿಯಾದ ಮೂಲ ದ್ರಾವಿಡಕ್ಕಿಂತ, ಪಡೆದತಾಯಿ ಸಂಸ್ಕೃತದಿಂದ ವಿಶೇಷವಾಗಿ ಪರಿಪೋಷಿತವಾಯಿತು ಕನ್ನಡ. ಅವರಲ್ಲಿನ ಧರ್ಮ-ದರ್ಶನ, ಸಾಹಿತ್ಯ-ಶಾಸ್ತ್ರ--ಮೊದಲಾದ ವಿವಿಧ ಪ್ರಕಾರಗಳ ಪದಗಳನ್ನು ಸ್ವೀಕರಿಸಿ, ಹಲವಕ್ಕೆ ತನ್ನ ಸಂಸ್ಕಾರ ಕೊಟ್ಟು, ತನ್ನ ಜಾಯಮಾನಕ್ಕೆ ಹೊಂದಿಸಿಕೊಂಡಿತು.

ಉದಾ. ; ಅಹಿಂಸೆ, ಅಸತ್ಯ, ಆಶ್ರಯ, ಸತ್ಯ, ಧರ್ಮ, ದೈವ,
ದಯೆ, ದಾನ, ತಪ, ಶೀಲ, ಆಶೆ, ಭಾಷೆ ಇತ್ಯಾದಿ.

ಈ ಸ್ವೀಕರಣ ವಿಶೇಷವಾಗಿ ಸಾಂಸ್ಕೃತಿಕ ಪದಕೋಶಕ್ಕೆ ಸಂಬಂಧಿಸಿದ್ದರಿಂದ ಇದನ್ನು ಸಾಂಸ್ಕೃತಿಕ ಸ್ವೀಕರಣ (Cultural Borrowing) ಎಂದು ಕರೆಯುತ್ತಾರೆ[19]. ಇಂದು ಸಂಸ್ಕೃತ ಶಬ್ದಗಳನ್ನು ಬಳಸದೆ ಒಂದು ವಾಕ್ಯವನ್ನಾಡುವುದೂ ಕಷ್ಟ. ಅಷ್ಟರ ಮಟ್ಟಿಗೆ ಸಂಸ್ಕೃತ ತನ್ನ ಪ್ರಭಾವ ಬೀರಿದೆ ಕನ್ನಡದ ಮೇಲೆ.

ಸಾಮಾನ್ಯವಾಗಿ ಕನ್ನಡದಲ್ಲಿನ ತದ್ಭವಗಳಿಗೆ ಪ್ರಾಕೃತವೇ ಪ್ರೇರಣೆ. ಭಾಷಾ ಸೌಲಭ್ಯ ದೃಷ್ಟಿಯಿಂದ ಸಂಸ್ಕೃತ ಪದಗಳನ್ನು ಹೊಂದಿಸಿಕೊಂಡು, ಕನ್ನಡ ತನ್ನ ಶಬ್ದ ಕೋಶವನ್ನು ಹೆಚ್ಚಿಸಿಕೊಂಡಿದೆ.

ಉದಾ. ; ಸ್ನೇಹ (ತ್ಸ) ನೇಹ (ತ್ಭ) ಸ್ತಂಭ (ತ್ಸ) ಕಂಬ (ತ್ಭ) ಇತ್ಯಾದಿ.

### 3.6.9 (ಆ) ಗ್ರೀಕ್ ಮತ್ತು ರೋಮನ್ ಶಬ್ದಗಳು :

ಗ್ರೀಸ್ ಮತ್ತು ರೋಮ್ ದೇಶಗಳಿಗೂ ಕರ್ನಾಟಕಕ್ಕೂ ಪ್ರಾಚೀನಕಾಲ ದಿಂದಲೂ ವಾಣಿಜ್ಯ ಸಂಪರ್ಕ ಇತ್ತು. ಅಂದು ವಿನಿಮಯ ಮಾಧ್ಯಮಗಳಾದ ನಾಣ್ಯಗಳು ಪರಸ್ಪರ ಬದಲಾವಣೆಗೊಂಡಿರಬೇಕು. ಅದರ ಪರಿಣಾಮವಾಗಿ ಕನ್ನ

---

19 ಭಾಷಾ ಸ್ವೀಕರಣದಲ್ಲಿ ಎರಡು ವಿಧ: (i) (Cultural Borrowing) (ii) ಉಪ-ಭಾಷಾ ಸ್ವೀಕರಣ (Dialectial Borrowing). ಎರಡು ಸ್ವತಂತ್ರ ಭಾಷೆಗಳ ನಡುವಣ ಸ್ವೀಕರಣ ಸಾಂಸ್ಕೃತಿಕ ಒಂದೇ ಭಾಷೆಯ ಎರಡು ಉಪಭಾಷೆಗಳ ನಡುವಣ ಸ್ವೀಕರಣ, ಉಪಭಾಷಾ ಸ್ವೀಕರಣ. ಮೊದಲನೆಯದು ಹೆಚ್ಚು ಪ್ರಮಾಣದಲ್ಲಿ ನಡೆದರೆ, ಎರಡನೆಯದು ತುಂಬಾ ಕಡಮೆ ಪ್ರಮಾಣದಲ್ಲಿ ನಡೆಯುತ್ತದೆ. ಎರಡನೆಯದು : ಉದಾ : ಗಡಗಡ ಬಾರ್ಲೇ ತಮ್ಮ—ಧಾರವಾಡದ ಮಾತನ್ನು 'ಮೈಸೂರಿನವರು, ಮೈಸೂರಿನವರ 'ಬಿಸಿ ಬುದ್ದಿ ಯೋಳ'—ಅನ್ನುವುದನ್ನು ಧಾರವಾಡದವರು ಅರ್ಥ ಮಾಡಿಕೊಂಡು ಬಳಸಿಕೊಳ್ಳುವುದು.

ದಲ್ಲಿ 'ದಮ್ಮಡಿ' ಎಂಬ ಪದ ಉಳಿದು ಬಂದಿದೆ. ಯಾರಾದರೂ 'ಏನಪ್ಪ ಹತ್ತು ರೂಪಾಯಿ ಇದ್ರೆ ಕೊಡ್ತೀಯಾ ? ಎಂದು ಕೇಳಿದರೆ, ಮತ್ತೊಬ್ಬ 'ಹೋಗೋ ಮಾರಾಯ, ಒಂದು 'ದಮ್ಮಡಿ'ಗೂ ಗತಿ ಇಲ್ಲ ನನ್ನ ಹತ್ತಿರ, ಅನ್ನುತ್ತಾನೆ. ಈ ದಮ್ಮಡಿ ಗ್ರೀಕ್ ಭಾಷೆಯ 'ಡ್ರಾಕ್ಮಾ' (Drachma) ಎಂಬ ನಾಣ್ಯದ ತದ್ಭವ ಪದ. ಡ್ರಾಕ್ಮಾ> ದ್ರಮ್ಮ> ದ್ರಮ್ಮಾಣಿ> ದಮ್ಮಡಿ ಆಗಿದೆ.

ಇದೇರೀತಿ ರೋಮನರ ದುರಾಕ್ರಮಣಕ್ಕೆ ಸಿಕ್ಕು ಗ್ರೀಸ್ ನಾಶವಾಯಿತು. ಗ್ರೀಸಿನೊಡನಿದ್ದ ಕರ್ನಾಟಕದ ವಾಣಿಜ್ಯ ಸಂಪರ್ಕ ಕಡಿದುಬಿತ್ತು. ಆದರೆ ರೋಮ್ ನೊಡನೆ ಅದು ಮುಂದುವರಿಸಿತು. ಅದರಿಂದಾಗಿ ರೋಮನ್ ಭಾಷೆಯ ಡೆನೇರಿಯಸ್ (Denarius) ಎಂಬ ನಾಣ್ಯವು 'ದೀನಾರ' ಎಂದು ಕನ್ನಡೀಕೃತವಾಗಿ ಕ್ರಿ. ಶ. 9–10ನೆಯ ಶತಮಾನದ ವಡ್ಡಾರಾಧನೆಯಲ್ಲಿ ಅನೇಕ ಸಲ ಬಳಕೆಯಾಗಿದೆ.

### 3.6.10 (ಇ) ಅರಬ್ಬೀ, ಉರ್ದು ಮತ್ತು ಪರ್ಷಿಯನ್ ಭಾಷಾಶಬ್ದಗಳು:

ಕನ್ನಡಿಗರಿಗೂ ಅರಬ್ಬಿಯರಿಗೂ ಪ್ರಾಚೀನ ಕಾಲದಿಂದಲೂ ವಿಶ್ವಾಸ ಇತ್ತು, ವ್ಯಾಪಾರ ಸಂಬಂಧವೂ ಇತ್ತು. ಅಲ್ಕೆಮಿಸ್ಟಸ್ ಎಂಬ ಅರಬ್ಬೀಯರು ಭಾರತಕ್ಕೆ ಅದರಲ್ಲೂ 'ಸಂಬಾರ ಪದಾರ್ಥಗಳ ಕಣಜ' ಎನ್ನಿಸಿಕೊಂಡಿದ್ದ ಕರ್ನಾಟಕಕ್ಕೆ ವಿಶೇಷ ವಾಗಿ ಬರುತ್ತಿದ್ದರು. ಚಾಕು, ಚೂರಿ, ಕವಡೆ, ಕನ್ನಡಿಗಳನ್ನು ಕೊಟ್ಟು, ಸಂಬಾರ ಪದಾರ್ಥಗಳನ್ನು ಕೊಂಡೊಯ್ಯುತ್ತಿದ್ದರು. ಮತ್ತೆ ಕೆಲವರು ಅರಬ್ಬೀ ಪೆಡ್ಲರ್ಸ್ ಅಥವಾ ಸಮುದ್ರಗಳ್ಳರು ಗೋವೆ ಮಾರ್ಗವಾಗಿ ಕರ್ನಾಟಕವನ್ನು ಪ್ರವೇಶಿಸಿ, ಇಲ್ಲಿನ ಹಲವು ಪ್ರದೇಶಗಳಲ್ಲಿ ಕಳ್ಳತನ ಮಾಡಿಕೊಂಡೊ ಅಥವಾ ಕನ್ನಡಿಗರಿಗೆ ಗಿಲೀಟು (Guilt) ಮಾಲುಗಳನ್ನು ಕೊಟ್ಟೋ, ಸಿಕ್ಕಿದ್ದನ್ನು ಅಪಹರಿಸಿ ಕೊಂಡು ಹೋಗುತ್ತಿದ್ದರು. ಇವರ ಸಂಸರ್ಗದಿಂದ ಅನಾಮತ್ತು, ಖಜಾನೇ ಅಸಾಮಿ, ನಾಜೂಕು, ವಸೂಲು, ಮಾಮೂಲು, ಜಪ್ತಿ ಮೊದಲಾದ ಅರಬ್ಬಿ ಪದಗಳು ಕನ್ನಡಕ್ಕೆ ಬಂದವು.

ಕ್ರಿ. ಶ. 11–12ನೆಯ ಶತಮಾನಗಳಲ್ಲಿ ಸುಲ್ತಾನರ ಪ್ರವೇಶ ಆಯಿತು. ಕರ್ನಾಟಕಕ್ಕೆ. ಘಜ್ನಿಮೊಹಮ್ಮದ್, ಮಲ್ಲಿಕಾಫರ್, ಮೊದಲಾದವರು ಮೇಲಿಂದ ಮೇಲೆ ದಾಳಿ ನಡೆಸಿದರು. ಆದರೆ ಅವರು ಕರ್ನಾಟಕದಲ್ಲೇ ನೆಲೆನಿಂತು ರಾಜ್ಯ ಸ್ಥಾಪನೆ ಮಾಡಲಿಲ್ಲ. ಮಾಡದಿದ್ದರೂ ಆ ಕಾಲಕ್ಕೆ ಅನೇಕ ಫಾರಸಿ ಪದಗಳು ಕನ್ನಡ ದೊಳಗೆ ನುಗ್ಗಿದವು.

ಉದಾ. : ತ್ರಾಸು, ಜಮೀನು, ದಸ್ತಾವೇಜು, ಶಿಫಾರಸು, ಸಿಬ್ಬಂದಿ— ಮೊದಲಾದವು.

ಅನಂತರ ವಿಜಯನಗರ ಸಾಮ್ರಾಜ್ಯದ ವಿನಾಶಕ್ಕೆ ಕಾರಣರಾದ ಬಹಮನೀ ಸುಲ್ತಾನರ ಕಾಲದಲ್ಲಿ(ಕ್ರಿ.ಶ. 15ನೇಶತಮಾನ)ಮತ್ತು ಶ್ರೀರಂಗಪಟ್ಟಣದಲ್ಲಿ ಆಡಳಿತ ನಡೆಸಿದ ಹೈದರ್, ಟಿಪ್ಪುಸುಲ್ತಾನರ (ಕ್ರಿ. ಶ. 18ನೇ ಶತಮಾನ) ಕಾಲದಲ್ಲಿ ಕರ್ನಾಟಕದಲ್ಲಿ ಆಡಳಿತಕ್ಕೆ ಸಂಬಂಧಿಸಿದ ಸರ್ಕಾರ, ಕಛೇರಿ, ದಫ್ತರ್, ಖಿರ್ದಿ, ಇರ್ಸಾಲು, ಜಮಾಬಂದಿ, ಕಾಗದ, ಖರೀದಿ, ಅಸಲು, ಅರ್ಜಿ, ಅಮಲ್ದಾರ, ಶೇಕದಾರ, ತಹಶೀಲ್ದಾರ್, ಖಾಲಿ, ಖರ್ಚು, ಗುಲಾಮ, ಜವಾನ, ಸಾಹೇಬ, ಚಿಲ್ಲರೆ, ಚಾಲ್ತಿ, ಚಲಾವಣೆ, ರುಜು, ಸೇರು, ಪಾವು, ಸವಾರಿ ಇತ್ಯಾದಿ ಉರ್ದು ಪದಗಳು ಕನ್ನಡ ಶಬ್ದಕೋಶವನ್ನು ನಿರ್ಭೀತವಾಗಿ ಪ್ರವೇಶಿಸಿದವು.

### 3.6.11 (ಈ) ಪೋರ್ಚುಗೀಸ್ ಮತ್ತು ಇಂಗ್ಲಿಷ್ ಭಾಷಾ ಶಬ್ದಗಳು :

ಕ್ರಿ. ಶ. 1510 ರಲ್ಲೇ ಪೋರ್ಚುಗೀಸರು ಗೋವೆಯಲ್ಲಿ ತಮ್ಮ ಅಧಿಪತ್ಯ ಸ್ಥಾಪಿಸಿದರು. ಅಂದಿನಿಂದಲೂ ಕರ್ನಾಟಕದೊಡನೆ ಅವರ ಸಂಪರ್ಕ ಇದ್ದೇ ಇತ್ತು. ಆ ಸಂದರ್ಭದಲ್ಲಿ ಸಾಕಷ್ಟು ಪದಗಳು ಕನ್ನಡಕ್ಕೆ ಬಂದು ಸೇರಿದುವು.

ಉದಾ. ; ಅಲ್ಮಾರು, ಮೇಜು, ಪಾದ್ರಿ, ತಂಬಾಕು (ಟೊಬ್ಯಾಕೊ) ಬಂದರು, ಬಾತು, ಅನಾನಸು, ಕಂದೀಲು (ಕ್ಯಾಂಡಲ್) ಸಾಬೂನು(SABAO) ಇತ್ಯಾದಿ.

ಪೋರ್ಚುಗೀಸರು ಕರ್ನಾಟಕದ ಸಮೀಪದ ಗೋವೆಯಲ್ಲಿದ್ದುದರಿಂದ ಅನೇಕ ಪೋರ್ಚುಗೀಸ್ ಪದಗಳು ಸೇರಿಕೊಂಡಂತೆ ದೂರದ ಅಂದರೆ ಪಾಂಡಿಚೆರಿಯಲ್ಲಿದ್ದ ಫ್ರೆಂಚರಾಗಲಿ, ಕರ್ನಾಟಕದಲ್ಲಿ ಅಥವಾ ದಕ್ಷಿಣ ಭಾರತದಲ್ಲಿ ಬಹಳಕಾಲ ನಿಲ್ಲದೆಹೋದ ಡಚ್ಚರಾಗಲಿ, ಕನ್ನಡದ ಮೇಲೆ ಪ್ರಭಾವ ಬೀರಲಿಲ್ಲ. ಆದರೆ ಸುಮಾರು ಎರಡು ಶತಮಾನಗಳ ಕಾಲ ಭಾರತರಾಷ್ಟ್ರವನ್ನಾಳಿದ ಬ್ರಿಟಿಷರು ತಮ್ಮ ವಿಶೇಷ ಪ್ರಭಾವ ಬೀರಿದರು, ಕನ್ನಡಿಗರ ಭಾಷೆ, ಸಂಸ್ಕೃತಿ, ನಾಗರಿಕತೆ ಮತ್ತು ವ್ಯಾಪಾರ ವ್ಯವಹಾರಗಳ ಮೇಲೆ, ಸ್ಥೂಲವಾಗಿ ಹೇಳುವುದಾದರೆ ಕನ್ನಡಿಗರ ಧಾರ್ಮಿಕ, ಆಧ್ಯಾತ್ಮಿಕ, ಕ್ಷೇತ್ರಗಳಲ್ಲಿ ಸಂಸ್ಕೃತ ಪ್ರಭಾವ ಬೀರಿದಂತೆ, ಆಡಳಿತ ವಲಯದ ಮೇಲೆ ಉರ್ದು, ಪರ್ಷಿಯನ್, ಅರಬ್ಬೀ ಭಾಷೆಗಳು ಪ್ರಭಾವ ಬೀರಿದಂತೆ, ವಿಜ್ಞಾನ, ಶಾಸಕಾಂಗ, ನ್ಯಾಯಾಂಗ, ಸಾಹಿತ್ಯ ಮೊದಲಾದುವುಗಳ ಮೇಲೆ ಇಂಗ್ಲಿಷ್ ತನ್ನ ವಿಶೇಷ ಪ್ರಭುತ್ವ ಸ್ಥಾಪಿಸಿತು. ಸಂಸ್ಕೃತ ಬಳಸದೆ ಕನ್ನಡ ಮಾತ ನಾಡಲು ಸಾಧ್ಯವಿಲ್ಲ ಎಂದಂತೆ, ಇಂಗ್ಲಿಷ್ ಶಬ್ದಗಳನ್ನು ಬೆರಸದೆ ಕನ್ನಡದಲ್ಲಿ ಮಾತ ನಾಡಲು ಬರುವುದೇ ಇಲ್ಲ ಎಂಬ ಕಾಲವೂ ಇತ್ತು. ಅಷ್ಟು ಪ್ರಮಾಣದಲ್ಲಿ ಪ್ರಭಾವ ಬೀರಿದ ಇಂಗ್ಲಿಷ್, ಲಾಂದ್ರ, ಆಸ್ಪತ್ರೆ, ಕೋರ್ಟು, ಲಾಯರ್, ಹಿರಂಗು, ಕೇಸು,

ಫೀಸು, ಬ್ರೆಡ್ಡು, ಬಿಸ್ಕತ್ತು ಮೊದಲಾದ ನೂರಾರು, ಸಾವಿರಾರು ಪದಗಳನ್ನು ಕನ್ನಡಕ್ಕೆ ಕೊಟ್ಟಿದೆ. ಅದರ ಶ್ರೀಮಂತಿಕೆಗೆ ಕಾರಣವಾಗಿದೆ.

3,6.12. ಇತ್ತೀಚಿಗೆ ಪ್ರಸಾರ ಮಾಧ್ಯಮಗಳಾದ ಟಿ. ವಿ., ಸಿನೆಮಾ, ವೃತ್ತಪತ್ರಿಕೆ ಮೊದಲಾದುವುಗಳ ಮೂಲಕ ಅನೇಕ ಪದಗಳು ಕನ್ನಡಕ್ಕೆ ಬಂದಿವೆ.

ಉದಾ. ; ಜಪಾನ್‌ನ 'ಸಾಯುನಾರ' (Good Bye) ಬಂದಿತು. ಬೌದ್ಧ ಭಿಕ್ಷುಗಳ ಸಂಸರ್ಗದಿಂದಾಗಿ ಚೀನಾಂಬರ (ರೇಶ್ಮೆ) ಬಂದು ಸೇರಿಕೊಂಡಿದೆ. ರಷ್ಯಾ ದೊಡನೆ ಭಾರತದ ಸಾಂಸ್ಕೃತಿಕ ಸಂಬಂಧ ಬಹಳಕಾಲ ಇದ್ದಿದ್ದರೆ (ಈಗ ಕಡಿದು ಬಿತ್ತು) ಬಹುಶಃ ಕನ್ನಡದಲ್ಲೂ ಅನೇಕ ರೂಸಿ ಪದಗಳು ಬಂದು ಸೇರುತ್ತಿದ್ದುವೋ ಏನೋ ! ಒಟ್ಟಿನಲ್ಲಿ, ಜನಸಂಪರ್ಕ ಹಾಗೂ ಸಂಸರ್ಗಗಳಿಂದ ಭಾಷಾ ಸ್ವೀಕರಣ ಧಾರಾಳವಾಗಿ ನಡೆಯುತ್ತಿದೆ.

## ಆಕರ ಗ್ರಂಥಗಳು


೧. ದ್ರಾವಿಡ ಭಾಷಾ ವ್ಯಾಸಂಗ (ಪರಿಷ್ಕೃತ ತೃತೀಯ ಆವೃತ್ತಿ) 1986
—ಡಾ॥ ಸಂಗಮೇಶ ಸವದತ್ತಿ ಮಠ

೨. ಕನ್ನಡ ಭಾಷಾ ವ್ಯಾಸಂಗ (ತೃತೀಯ ಪಠ್ಯ ಆವೃತ್ತಿ) 1986
—ಡಾ॥ ಸಂಗಮೇಶ ಸವದತ್ತಿ ಮಠ

೩. ಜನಪದ ಭಾಷಾ ಸಮೀಕ್ಷೆ 1988
—ಡಾ॥ ಸಂಗಮೇಶ ಸವದತ್ತಿ ಮಠ

೪. ದ್ರಾವಿಡ ಭಾಷಾ ವಿಜ್ಞಾನ ಪರಿಚಯ 1985
—ಡಾ॥ ಸಂಗಮೇಶ ಸವದತ್ತಿ ಮಠ

೫. ದ್ರಾವಿಡ ಭಾಷೆಗಳು 1974
—ಡಾ॥ ಸಂಗಮೇಶ ಸವದತ್ತಿ ಮಠ

೬. ದ್ರಾವಿಡ ಜನಾಂಗ 1979
—ಡಾ॥ ಸಂಗಮೇಶ ಸವದತ್ತಿ ಮಠ

೭. ವರ್ಣನಾತ್ಮಕ ಭಾಷಾ ವಿಜ್ಞಾನ 1971
—ಜೆ. ಎಸ್. ಕುಳ್ಳಿ

೮. ಭಾಷಾ ವಿಜ್ಞಾನದ ಮೂಲ ತತ್ತ್ವಗಳು
(ತಿದ್ದಿದ ಎರಡನೆಯ ಮುದ್ರಣ) 1971
—ಡಾ॥ ಎಂ. ಚಿದಾನಂದಮೂರ್ತಿ

೯. ದ್ರಾವಿಡ ಭಾಷೆ 1975
ಡಾ. ಶಂ. ಬಾ. ಜೋಶಿ

೧೦. ದ್ರಾವಿಡ ಭಾಷೆಗಳ ಸಾಹಿತ್ಯ ಚರಿತ್ರೆ 1976
—ಪ್ರಾ. ಎನ್. ಎಸ್. ಗದಗಕರ

೧೧. ಕನ್ನಡ ಭಾಷೆ ಮತ್ತು ವ್ಯಾಕರಣ : ಒಂದು ಅಧ್ಯಯನ 1986
—ಡಾ॥ ಕೆ. ಕುಶಾಲಪ್ಪ ಗೌಡ

೧೨. ಕನ್ನಡ ವಾಕ್ಯಗಳು 1978
—ಡಿ. ಎಸ್. ಶಂಕರಭಟ್ಟ

೧೩. ಉಪ ಭಾಷೆ 1972
—ಕೃಷ್ಣ ಪರಮೇಶ್ವರ ಭಟ್ಟ

೧೪. ಉಪ ಭಾಷಾ ಅಧ್ಯಯನ 1979
—ಶಾಲಿನಿ ರಘುನಾಥ

೧೫. ಕನ್ನಡ ಭಾಷಾಶಾಸ್ತ್ರ (ನಾಲ್ಕನೆಯ ಮುದ್ರಣ) 1968
—ರಾ. ಯ. ಧಾರವಾಡಕರ

೧೬. ಕನ್ನಡ ಭಾಷೆಯ ಚರಿತ್ರೆ —ಡಾ॥ ಎನ್. ಎಸ್. ತಾರಾನಾಥ
(ಮೈಸೂರು ವಿಶ್ವವಿದ್ಯಾಲಯದ ತೆರಪಿನ ಶಿಕ್ಷಣದ ಮಾರ್ಗದರ್ಶಕ ಪಾಠ)

೧೭. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ಭಾಗ-೧ 1974
—(ಸಂ) ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ

೧೮. ಕನ್ನಡ ಕೈಪಿಡಿ 1975

೧೯. History of Kannada Language 1969
—R. Narasimhachar

೨೦. ಕನ್ನಡ ಭಾಷಾ ಶಾಸ್ತ್ರ (ಅಪ್ರಕಟಿತ ಹೊತ್ತಿಗೆ)
–ಕೆ. ವೆಂ. ರಾಘವಾಚಾರ್

೨೧. ಕನ್ನಡ ಭಾಷೆಯ ಚರಿತ್ರೆ 1975
–ಪ್ರ. ಗೋ. ಕುಲಕರಣಿ

೨೨. ದ್ರಾವಿಡ ಭಾಷಾ ವಿಜ್ಞಾನ 1972
–ಹಂಪ. ನಾಗರಾಜಯ್ಯ

೨೩. A Comparative Grammar of the Dravidian Languages 1976
—R. Cald Well

ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಂ ।
ಯದಿ ಶಬ್ದಾಹ್ವಯಂ ಜ್ಯೋತಿರಾ ಸಂಸಾರಾನ್ನ ದೀಪ್ಯತೇ ॥

ಮಾತೆಂಬ ಜ್ಯೋತಿಯು ಬೆಳಗದೆ ಇದ್ದಿದ್ದರೆ
ಜಗತ್ರಯವೆಲ್ಲದೂ ಕಗ್ಗತ್ತಲ ಮೊತ್ತವಾಗಿರುತ್ತಿತ್ತು

–ದಂಡಿ

ಸಿದ್ಧಪಡಿಸಿದವರು :

**ಕೆ. ಶಿವರಾಮು, ಐ.ಎ.ಎಸ್.**

# ಮಾದರಿ ಉತ್ತರಗಳು

## I ಭಾಷೆ ಎಂದರೇನು ?

ಭಾಷೆಯನ್ನು ಕುರಿತ ಪರಿಪೂರ್ಣ ವ್ಯಾಖ್ಯಾನ ಕಷ್ಟಸಾಧ್ಯ ಕೆಲಸ. ಅದರ ವ್ಯಾಪ್ತಿ ಬಹುದೊಡ್ಡದು. ಭಗವಂತ ಹೇಗೋ ಭಾಷೆಯ ಮೂಲ ಹಾಗೆ. ಅದೊಂದು ಚಿದಂಬರ ರಹಸ್ಯ. ಆದ್ದರಿಂದಲೇ ಓರ್ವ ಭಾಷಾವಿಜ್ಞಾನಿ ಹೇಳುತ್ತಾನೆ : ಭಾಷೆಯ ಬಗೆಗೆ ಮಾತನಾಡುವುದೆಂದರೆ ಮರದ ಒಲೆಯಲ್ಲಿ ಅಡುಗೆ ಮಾಡಿದಂತೆ!'. ಎಂದು. ಅದರರ್ಥ ಭಾಷೆಯನ್ನು ಕುರಿತ ಪ್ರಯತ್ನಗಳು ಯಶಸ್ವಿಯಾಗಿಲ್ಲ ಎಂದು ಆದರೂ ಅದರ ಬಗೆಗೆ ನಿರಂತರ ಶೋಧನೆ ಮತ್ತು ಚಿಂತನೆಗಳು ನಡೆಯುತ್ತಲೇ ಇವೆ, ಇದು ಶುಭೋದಯದ ಸೂಚನೆ.

ಭಾಷೆ ಎನ್ನುವುದು ಮೂಲತಃ ಒಂದು ಶಬ್ದವ್ಯಾಪಾರ. ಶಾಬ್ದಿಕ ಪ್ರವೃತ್ತಿ ಎಲ್ಲ ಪ್ರಾಣಿಗಳಲ್ಲಿಯೂ ಇದೆ. ನೋವು ನಲಿವುಗಳಿಗೆ, ಹಸಿವು ಕಸುವುಗಳಿಗೆ ಅವು ಪ್ರತಿಕ್ರಿಯಿಸುತ್ತವೆ; ತಕ್ಕಂತೆ ಉದ್ಗರಿಸುತ್ತವೆ. ಆ ಬಗೆಯ ಶಬ್ದಾಭಿವ್ಯಕ್ತಿಯ ಸಂಕೇತವೆ ಭಾಷೆ. ಭಾಷೆ ಎನ್ನುವುದು ಆತ್ಮವಿರುವ ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿ, ಎನ್ನುತ್ತಾನೆ ಈಸ್ಲರ್. ಅಂತೆಯೇ ಭಾಷೆ ಎನ್ನುವುದು ಸಮರ್ಥ ಸಂವಹನ ಸಾಧನ (Media for Communication) ಅಮೂರ್ತ ಭಾವಗಳಿಗೆಕೆ ಒಟ್ಟಮಾತಿನ ರೂಪ. ನಿತ್ಯವ್ಯವಹರಣೆಯ ಶ್ರೇಷ್ಠಮಾಧ್ಯಮ. ಅದು ಧ್ವನ್ಯಂಗಳ ನೆರವಿನಿಂದ ಪ್ರಕಟವಾಗುವ ಧ್ವನಿಸಂಕೇತಗಳ ಸಮುದಾಯ. ಬಾಯಿಂದ ಬರುವ ಶಬ್ದ ಸ್ವರೂಪವನ್ನು ಧ್ವನಿಮಾ (Phoneme) ಎನ್ನುತ್ತಾರೆ. ಅಂತಹ ಧ್ವನಿಮಾಗಳ ಒಟ್ಟಂದವೇ ಭಾಷೆ. ಆದ್ದರಿಂದ ಭಾಷೆ ಎನ್ನುವುದು ಬರಿಯ ಶಬ್ದ ವ್ಯಾಪಾರವಲ್ಲ, ಸುವ್ಯವಸ್ಥಿತ ಶಬ್ದವ್ಯಾಪಾರ. ಒಬ್ಬ ವಕ್ತೃವಿನ ಭಾವಗಳು ಬೇರೊಬ್ಬ ಶ್ರೋತೃವಿನ ಭಾವಕಲ್ಪವನ್ನು ತಲುಪಿ, ಗ್ರಹಣದ ಮೂಲಕ ಅಲ್ಲಿ ಆಲೋಚನೆಯ ಅಲೆಗಳನ್ನೆಬ್ಬಿಸುವ ಸಾಧನ.

ಭಾಷೆ ಎಂಬುದು ಸಂಸ್ಕೃತ ಭಾಷಾ ಶಬ್ದದ ತದ್ಭವ. ಸಂಸ್ಕೃತದ ಮೂಲ ಧಾತು 'ಭಾಷ್'. ಅಂದರೆ ಉಚ್ಚರಿಸು, ಮಾತನಾಡು ಎಂದು. ಲ್ಯಾಟಿನ್‌ನ 'Lingua' ಇಂಗ್ಲಿಷ್‌ನಲ್ಲಿ Language ಆಗಿದೆ. Linguaಕ್ಕೆ Tongue Spoken word ಎಂಬರ್ಥಗಳಿವೆ. ಆದ್ದರಿಂದ ಭಾಷೆ ಎಂಬುದು ನುಡಿರೂಪೀ ವ್ಯವಹರಣ ಯೋಗ್ಯ

---

Language is a system of arbitrary Vocal symbols by means of which a social group Co-operaters.

—Bloc and Tragger.

ಸಾಧನ. ಇಷ್ಟಾದರೂ ಯಾವ ವ್ಯಾಖ್ಯಾನವೂ ಪರಿಪೂರ್ಣ ಅಲ್ಲ ನಾವು ಮೊದಲೇ ಹೇಳಿದಂತೆ. ಆದರೆ ಬ್ಲಾಕ್ ಮತ್ತು ಟ್ರಾಗರ್ ಎಂಬ ಭಾಷಾವಿಜ್ಞಾನಿಗಳ ವ್ಯಾಖ್ಯಾನವು ಸರ್ವಸಮ್ಮತವಾಗಿದೆ. ಅವರು ಹೇಳುತ್ತಾರೆ : **'ಭಾಷೆ ಎಂಬುದು ಯಾದೃಚ್ಛಿಕ ಧ್ವನಿಸಂಕೇತಗಳ ಒಂದು ವ್ಯವಸ್ಥೆ. ಅದರ ಮೂಲಕ ಸಮುದಾಯವೊಂದು ಸಹಕರಿಸುತ್ತದೆ.'** ಎಂದು. ಸಹಕರಿಸುವುದರ ಅರ್ಥ ವ್ಯವಹರಿಸುವುದು.

ಬ್ಲಾಕ್ ಮತ್ತು ಟ್ರಾಗರ್‌ರವರ ವ್ಯಾಖ್ಯಾನದಲ್ಲಿ ಸ್ಥೂಲವಾಗಿ ಎರಡು ಅಂಶಗಳ ಸ್ಪಷ್ಟೀಕರಣ ಇದೆ. ಒಂದು, ಭಾಷೆ ಎನ್ನುವುದು ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆ, ಮತ್ತೊಂದು ಸಮಾಜ ಅಥವಾ ಸಮುದಾಯವೊಂದು ಅದರೊಡನೆ ಸಹಕರಿಸುತ್ತದೆ (ವ್ಯವಹರಿಸುತ್ತದೆ). ಮೊದಲನೆಯದು ಭಾಷೆಯ ರೂಪವನ್ನು ಹೇಳಿದರೆ, ಎರಡನೆಯದು ಅದರ ಕಾರ್ಯವನ್ನು ಸೂಚಿಸುತ್ತದೆ. ಅವರ ಪ್ರಕಾರ 'ಭಾಷೆ' ಎಂಬುದು ಒಂದು ವರ್ಗದ ಒಂದು ವಲಯದ ಜನರ ಇಚ್ಛೆಗನುಗುಣವಾದ ಶಬ್ದರೂಪೀ ಸಂಕೇತ. ಉದಾಹರಣೆಗೆ-ಕನ್ನಡ ಭಾಷೆಯನ್ನಾಡುವ ಒಂದು ವರ್ಗ ಒಂದು ನಿರ್ದಿಷ್ಟವಸ್ತುವನ್ನು 'ನೀರು' ಎಂದಿತು. ಮತ್ತೊಂದು ಅದೇ ವಸ್ತುವನ್ನು 'ಜಲ' ಎಂತಲೂ ಮಗುದೊಂದು 'ವಾಟರ್' ಎಂತಲೂ ಕರೆದುವು. ಇವೆಲ್ಲವೂ ಆ ವಸ್ತುವಿಗಿದ್ದ ಶುದ್ಧ ಅಥವಾ ಮೂಲ ನಾಮಗಳಲ್ಲ. ಆ ವಸ್ತುವು ತಾನು ಹುಟ್ಟುವಾಗಲೇ ಆ ಹೆಸರುಗಳ ತಲೆಪಟ್ಟಿ ಕಟ್ಟಿಸಿಕೊಂಡು ಹುಟ್ಟಿಲ್ಲ. ಅದು ಮೊದಲು ಹುಟ್ಟಿತು. ಅದನ್ನು ಒಂದೊಂದು ವಲಯದ ಜನತೆ ಒಂದೊಂದು ಹೆಸರಿಟ್ಟು ಕರೆಯಿತು. ಅದು ರೂಢಿಗೆ ಬಂದು ಅರ್ಥ ಸಂಯೋಜನೆ ಪಡೆಯಿತು.

ಹೀಗೆ ರೂಪಗೊಂಡ ಶಾಬ್ದಿಕ ಅಭಿವ್ಯಕ್ತಿಯಲ್ಲಿ ಒಂದು ವ್ಯವಸ್ಥೆ ಇದೆ. ಅದು ಅಡ್ಡಾದಿಡ್ಡಿ ರಚನೆಯಾಗುವುದಿಲ್ಲ. 'ಹಣ್ಣ ಅವನನ್ನು ತಿಂದಳು' ಎನ್ನುವುದಿಲ್ಲ 'ಅವನು ಹಣ್ಣನ್ನು ತಿಂದನು' ಎಂದೇ ಹೇಳುವುದು. ಈ ರೀತಿ ಕರ್ತೃ, ಕರ್ಮ ಮತ್ತು ಕ್ರಿಯೆಗಳಲ್ಲಿ ಕ್ರಮಬದ್ಧತೆ, ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ವೈಜ್ಞಾನಿಕ ವಿಶ್ಲೇಷಣೆ, ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸುವಲ್ಲಿ ವಿಶಿಷ್ಟ ವಿವೇಚನೆ ಇಟ್ಟುಕೊಂಡೇ ಅಭಿವ್ಯಕ್ತವಾಗುತ್ತದೆ ಭಾಷೆ. ಅದು ಕೇಶಿರಾಜ ಹೇಳುವಂತೆ 'ನಾಮರೂಢಿಯಳಿಯದ'ರೂಪ; ಭಾಷಾ ಮರ್ಯಾದೆಯನ್ನು ಕಾಪಾಡುವ ಕ್ರಮ. ಇದೇ ಅದರ ವ್ಯವಸ್ಥೆ.

ಎರಡನೆಯದು. 'ಸಮುದಾಯವೊಂದು ಅದರೊಡನೆ ವ್ಯವಹರಿಸುವುದು' ಪ್ರತಿಯೊಬ್ಬ ವ್ಯಕ್ತಿಯೂ ಒಂದೊಂದು ವಿಶಿಷ್ಟ ಸಮಾಜದ ಸದಸ್ಯನಾಗಿರುತ್ತಾನೆ. ಸಮುದಾಯ ಒಪ್ಪಿದ, ರಾಜಕಾರಣ ಅಪ್ಪಿದ, ಧರ್ಮವು ರೂಪಿಸಿಕೊಟ್ಟ ಸಮಾಜ ಸಂಹಿತೆಗಳಿಗೆ ಅವನು ಬದ್ಧನಾಗಿರುತ್ತಾನೆ. ಎಲ್ಲ ಕ್ಷೇತ್ರಗಳಲ್ಲೂ ವಿನಿಮಯಗೊಳ್ಳುವ ಭಾಷೆಯೊಡನೆ ಅವನು ರಾಜಿಮಾಡಿಕೊಂಡೇ ಬದುಕುತ್ತಾನೆ, ಬದುಕಬೇಕು. ಇಲ್ಲವಾದರೆ

ಅವನ ಬದುಕಿನ ಬಂಡಿ ಮುಂದುವರಿಯುವುದೇ ಇಲ್ಲ. ಆದ್ದರಿಂದ ಭಾಷೆ ಸಾಮಾಜಿಕನ ಪ್ರಾಥಮಿಕ ಅಗತ್ಯತೆಗಳನ್ನು ಪೂರೈಸಲು ನೆರವಾಗುತ್ತದೆ.

ಭಾಷೆ ದೈವ ನಿರ್ಮಿತಿ ಅಲ್ಲ, ಅದು ಮಾನವನ ಸೃಷ್ಟಿ. ಅವನ ಅತ್ಯಮೂಲ್ಯ ಆವಿಷ್ಕಾರಗಳಲ್ಲಿ ಒಂದು. ಅದು ನೈಸರ್ಗಿಕ ಕ್ರಿಯೆ ಅಲ್ಲ, ಕಲಿತಕ್ರಿಯೆ. ಪ್ರಯತ್ನವಿಲ್ಲದೆ ಉಸಿರಾಟದಂತೆ ಸುಲಭವಾಗಿ ಸ್ವಾಭಾವಿಕವಾಗಿ ಬರುವಂಥದಲ್ಲ. ಅದು ಸಂಸರ್ಗದಿಂದ ಅಥವಾ ಸಂಪರ್ಕದಿಂದ ಹುಟ್ಟುವಂಥದು ಮತ್ತು ಬೆಳೆಯುವಂಥದು. ಭಾಷೆ ಆನುವಂಶಿಕ ಮತ್ತು ಪರಿಸರ ಜನ್ಯ. ಮಾನವ ಮಾತು ಬಲ್ಲವನು, ಮಾತನ್ನು ಕಂಡು ಹಿಡಿದವನು. ಮಾತು ಎಂಬುದು ಒಂದು ಜ್ಯೋತಿ. ದಂಡಿ ಹೇಳುವಂತೆ ಮಾತು ಎಂಬ ಜ್ಯೋತಿ ಬೆಳಗದಿದ್ದರೆ ಜಗತ್ತು ಇನ್ನೂ ಅಜ್ಞಾನದ ಕತ್ತಲೆಯಲ್ಲೇ ಇರಬೇಕಾಗುತ್ತಿತ್ತು ! ಆದ್ದರಿಂದ ಶರಣರು ಹೇಳುವಂತೆ 'ಮಾತೆಂಬುದು ಜ್ಯೋತಿರ್ಲಿಂಗ !'

**(ii) ಭಾಷಾ ವರ್ಗೀಕರಣ :**

ಪ್ರಪಂಚದಲ್ಲಿ ಸುಮಾರು ಮೂರೂವರೆ ಸಾವಿರ ಭಾಷೆಗಳಿವೆ. ಅವೆಲ್ಲವೂ ಒಂದೇ ರೂಪದವುಗಳಲ್ಲ. ಅಥವಾ ಒಂದೇ ಸ್ವರೂಪದವುಗಳೂ ಅಲ್ಲ. ಒಂದೊಂದರಲ್ಲೂ ವೈಶಿಷ್ಟ್ಯ ಇದ್ದೇ ಇರುತ್ತದೆ. ಅವುಗಳನ್ನು ಗುರುತಿಸಿ ಭಾಷಾ ವಿಜ್ಞಾನಿಗಳು ಅಧ್ಯಯನದ ಅನುಕೂಲಕ್ಕಾಗಿ ವರ್ಗೀಕರಿಸಿಕೊಟ್ಟಿದ್ದಾರೆ. ಅಂತಹ ವರ್ಗೀಕರಣದ ಮಾಪನಗಳು ಪ್ರಮುಖವಾಗಿ ನಾಲ್ಕು :

(೧) ಭೌಗೋಳಿಕ ವರ್ಗೀಕರಣ (Geographical Classification)
(೨) ಜಾನಾಂಗಿಕ ವರ್ಗೀಕರಣ (Racial Classification)
(೩) ಪ್ರಾರೂಪಿಕ ವರ್ಗೀಕರಣ (Typological Classification)
(೪) ವಾಂಶಿಕ ವರ್ಗೀಕರಣ (Geneological Classification)

ಒಂದು ದೇಶದ ಅಥವಾ ಒಂದು ರಾಷ್ಟ್ರದ ಜನರಾಡುವ ಭಾಷೆಗಳನ್ನು ಒಂದು ಗುಂಪಾಗಿ ವಿಂಗಡಿಸುವುದು ಭೌಗೋಳಿಕ ಭಾಷಾ ವರ್ಗೀಕರಣ. ಇದು ಒಂದು ಬಗೆಯ ಕಲಸುಮೇಲೋಗರ ! ಏಕೆಂದರೆ ಒಂದು ದೇಶದಲ್ಲಿ ಜನರಾಡುವ ಹಲವು ಭಾಷೆಗಳು ಒಂದೇ ರೂಪದಲ್ಲಿರುವುದಿಲ್ಲ; ಒಂದೇ ಜಾಯಮಾನಕ್ಕೆ ಸೇರಿದವುಗಳೂ ಅಲ್ಲ. ಅಂಥವುಗಳನ್ನು ಒಟ್ಟಿಗೆ ಕೂಡಿಸಿ ಒಂದು ವೇದಿಕೆಯ ಮೇಲೆ ತಂದಿರಿಸುವುದು ವೈಜ್ಞಾನಿಕ ವಿಂಗಡಣೆ ಎಂದೆನ್ನಿಸುವುದಿಲ್ಲ. ಭಾರತದಂತಹ ಸಂಕೀರ್ಣ ರಾಷ್ಟ್ರದಲ್ಲಿನ ಭಾಷೆಗಳೆಲ್ಲವನ್ನೂ ಒಂದು ವರ್ಗವಾಗಿ ಮಾಡುವುದರಲ್ಲಿ ಅರ್ಥವಿಲ್ಲ. ಇದೇ ತೊಡಕು ಆಫ್ರಿಕಾ ಖಂಡದ ಭಾಷೆಗಳಿಗೂ, ಉತ್ತರ ಅಮೇರಿಕೆಯ ಭಾಷೆಗಳಿಗೂ ಉಂಟು. ಅಲ್ಲಿನ ಭಾಷೆಗಳು ಭಿನ್ನ ಮೂಲವುಳ್ಳವಾದ್ದರಿಂದ ಭೌಗೋಳಿಕವಾಗಿ ವಿಭಜಿಸುವುದು ಸೂಕ್ತವಲ್ಲ.

ಎರಡನೆಯದು, ಜಾನಾಂಗಿಕ ವರ್ಗೀಕರಣ. ಆರ್ಯರು, ತುರೇನಿಯನರು, ಸೆಮಿಟಿಕ್ ಎಂಬ ಮೂರು ಜನಾಂಗಗಳ ಆಧಾರದ ಮೇಲೆ ಭಾಷೆಗಳನ್ನೂ ಆರ್ಯನ್

ಅಥವಾ ಇಂಡೋ-ಯುರೋಪಿಯನ್ ಭಾಷೆ, ತುರೇನಿಯನ್ ಅಥವಾ ಸಿಥಿಯನ್ ಭಾಷೆ, ಸೆಮಿಟಿಕ್ ಭಾಷೆ ಎಂದು ವಿಂಗಡಿಸಿದರು. ಆದರೆ ಇದೂ ಸಹ ಹೆಚ್ಚು ಸಮರ್ಪಕ ವರ್ಗೀಕರಣ ಆಗಲಿಲ್ಲ. ಏಕೆಂದರೆ ಈ ಮೂರು ಭಾಷಾವರ್ಗಗಳಿಗೆ ಸೇರದ ಭಾಷೆಗಳು ಅನೇಕ ಇವೆ. ಅಲ್ಲದೆ ಆಫ್ರಿಕದಲ್ಲೊ ಅಮೇರಿಕದಲ್ಲೊ ವಾಸಿಸುವ ಒಂದು ಜನಾಂಗ ಅಂದಿನಿಂದ ಇಂದಿನವರೆಗೂ ಒಂದೇ ಭಾಷೆಯನ್ನಾಡು ತ್ತಾರೆಂಬ ಭರವಸೆ ಇಲ್ಲ. ಅವರು ವಲಸೆ ಹೋದೆಡೆಯ ಭಾಷೆಯನ್ನು ಕಲಿತು ತಮ್ಮ ಮೂಲಭಾಷೆಯನ್ನು ಮರೆಯುತ್ತಾರೆ. ಆದ್ದರಿಂದ ಜನಾಂಗದ ಆಧಾರದ ಮೇಲೆ ಭಾಷೆಗಳನ್ನು ವಿಂಗಡಿಸಲಾಗದು. ಅದು ವೈಜ್ಞಾನಿಕ ವಿಂಗಡಣೆ ಆಗುವುದಿಲ್ಲ.

ಒಂದು ಭಾಷೆಗೆ ಬಾಹ್ಯ ಮತ್ತು ಆಂತರಿಕ ಎಂಬ ಎರಡು ವಲಯಗಳಿರುತ್ತವೆ. ದಿನಬಳಕೆಯ ಪದಗಳು, ಶರೀರದ ಅಂಗಾಂಗಗಳ ಹೆಸರುಗಳು ಇವೇ ಮೊದಲಾದವು ಬಾಹ್ಯ; ವ್ಯಾಕರಣಾಂಶಗಳನ್ನು ಒಳಗೊಂಡ ರಚನೆ ಆಂತರಿಕ. ಇವೆರಡನ್ನೂ ದೃಷ್ಟಿಯಲ್ಲಿಟ್ಟುಕೊಂಡು ಎಫ್. ವಿ. ಷ್ಲೆಗೆಲ್ ಮೊದಲಾದವರು ವರ್ಗೀಕರಿಸಿದರು. ಆದರೆ ಈ ಪ್ರಾರೂಪಾತ್ಮಕ ವರ್ಗೀಕರಣ ಕೆಲವು ವಿದ್ವಾಂಸರ ಆಸಕ್ತಿ ಕೆರಳಿಸಿದರೂ ಅನಂತರ ಅದು ಸಮರ್ಪಕ ಅಲ್ಲ ಎನ್ನಿಸಿತು. ಉದಾಹರಣೆಗೆ: ಚೀಣೀ ಭಾಷೆಯ ಕೆಲವು ವೈಲಕ್ಷಣ್ಯಗಳು ಇಂಗ್ಲಿಷ್ ಭಾಷೆಯಲ್ಲೂ ಇವೆ. ಹಾಗೆಂದು ಅಂಟು ಭಾಷೆ (Agglutinative Language) ಆದ ಇಂಗ್ಲಿಷನ್ನು ವಿವಿಕ್ತ ಭಾಷೆ (Isolating) ಆದ ಚೀಣೀಯೊಡನೆ ಸಮೀಕರಿಸಿ ವರ್ಗ ರೂಪಿಸಲು ಬರುವುದಿಲ್ಲ. ಆದ್ದರಿಂದ ಪ್ರಾರೂಪಾತ್ಮಕ ಅಥವಾ ರಾಚನಿಕ ಭಾಷಾ ವರ್ಗೀಕರಣ ದೋಷಮುಕ್ತ ಅಲ್ಲ.

ಕಡೆಯ, ವಾಂಶಿಕ ವರ್ಗೀಕರಣ ತುಂಬಾ ಸಮರ್ಪಕ ಮತ್ತು ಬಹುಜನ ಸ್ವೀಕೃತ. ಸ್ಥೂಲ ನೋಟಕ್ಕೆ ಕೆಲವು ಭಾಷೆಗಳು ಭಿನ್ನ ಭಿನ್ನವೆಂದು ಕಂಡರೂ ಮೂಲದಲ್ಲಿ ಒಂದೇ ಕಾಂಡದಿಂದ ಮೂಡಿ ಬಂದಿರುವುದು ತಿಳಿಯುತ್ತದೆ. ಒಂದು ಮೂಲ ಭಾಷೆಯನ್ನಾಡುತ್ತಿದ್ದ ಒಂದು ಜನಾಂಗ ಬೇರೆಡೆಗೆ ವಲಸೆ ಹೋಗಿ ನೆಲಸಿದ ಮೇಲೆ ತಮ್ಮ ತಾಯಿ ನುಡಿಯ ಸಂಪರ್ಕ ಕಳೆದುಕೊಳ್ಳುವುದು ಸಹಜ. ಹಾಗಾದಾಗ ಒಬ್ಬರಿಗೊಬ್ಬರಿಗೆ ಸಂಪರ್ಕ ಇಲ್ಲವಾಗಿ ಕೆಲವು ವೈಶಿಷ್ಟ್ಯಗಳನ್ನು ಬೆಳೆಸಿ ಕೊಂಡು ಮೂಲ ಭಾಷೆಯಿಂದ ಭಿನ್ನರಾಗುತ್ತಾರೆ. ಅಂತೆಯೇ ಬೇರೆ ಬೇರೆಡೆಗಳಲ್ಲಿ ನೆಲಸಿದ ಈ ಜನಾಂಗದವರ ನಡುವೆ ನದಿ ಅಥವಾ ಪರ್ವತಗಳು ಅಡ್ಡ ಬಂದರೆ ಸಂಪರ್ಕ ಕಡಿಮೆ ಆಗಿ ವೈಶಿಷ್ಟ್ಯಗಳು ಬೆಳೆಯುತ್ತವೆ. ಉದಾಹರಣೆಗೆ : ಮೂಲ ದ್ರಾವಿಡ (Proto-Dravidian) ಎಂಬ ಭಾಷೆಯ ಮಕ್ಕಳಾದ ಕನ್ನಡ, ತೆಲುಗು, ತುಳು, ತಮಿಳು ಮೊದಲಾದವು ಪ್ರತ್ಯೇಕಗೊಂಡು ತಮ್ಮ ತಮ್ಮ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡು ಸ್ವತಂತ್ರ ಭಾಷೆಗಳಾದವು. ಆದರೂ ಅವುಗಳ ಬೇರು ಇರುವುದು ಮೂಲ ದ್ರಾವಿಡದಲ್ಲಿ. ಕಾಲಗತಿಯಲ್ಲಿ ಎಷ್ಟೇ ಬದಲಾಗಿದ್ದರೂ ಅವುಗಳ ಮೂಲ

ರೂಪ ಮರೆಯಾಗುವುದಿಲ್ಲ. ಆ ತಾಯಿಯ ಕೆಲವು ಕಲ್ಯಾಣ ಗುಣಗಳನ್ನು ಅಂದರೆ ಲಿಂಗ, ವಚನ, ವಿಭಕ್ತಿ ಇತ್ಯಾದಿ ಲಕ್ಷಣಗಳನ್ನು ಉಳಿಸಿಕೊಂಡೇ ಇರುತ್ತವೆ. ಇಂತಹ ಜ್ಞಾತಿ ಭಾಷೆಗಳ (ಸೋದರ ಭಾಷೆಗಳ) ವರ್ಗವನ್ನು **ಭಾಷಾ ವಾಂಶ** ಅಥವಾ **ಭಾಷಾ ಪರಿವಾರ** ಎಂದು ಕರೆಯುತ್ತಾರೆ. ಇದು ತುಂಬಾ ವೈಜ್ಞಾನಿಕ ಭಾಷಾ ವಿಭಜನೆ.

ಮನುಷ್ಯರಲ್ಲಿ ರಕ್ತಸಂಬಂಧಿ ಕುಟುಂಬಗಳಲ್ಲಿದ್ದಂತೆ ಈ ಸೋದರ ಭಾಷೆಗಳಲ್ಲೂ ಪರಸ್ಪರ ಸಾಮ್ಯಾತೆಗಳಿರುತ್ತವೆ. ಉದಾಹರಣೆಗೆ :

| ಕನ್ನಡ | ತಮಿಳು | ಮಲೆಯಾಳಂ | ತೆಲುಗು |
|---|---|---|---|
| ಕೈ | ಕೈ | ಕೈ | ಚೆೈ |
| ಕಣ್ಣು | ಕಣ್ | ಕಣ್ | ಕನ್ನು |
| ಅಣ್ಣ | ಅಣ್ಣೆ | ಅಣ್ಣೆ | ಅನ್ನ |
| ತಮ್ಮ | ತಂಬಿ | ತಮ್ಮಿ | ತಮ್ಮುಡು |
| ಎರಡು | ಇರೆಂಡು | ರಂಡು | ರೆಡ್ದು |
| ಅವರು | ಅವರ್ | ಅವರ್ | ವಾರು |

ಇತ್ಯಾದಿ.

ಈ ಬಗೆಯ ವಾಂಶಿಕ ವರ್ಗೀಕರಣದ ಆಧಾರದ ಮೇಲೆ ಪ್ರಪಂಚದ ಭಾಷೆಗಳನ್ನು ಸುಮಾರು ಮೂವತ್ತೈದು ಭಾಷಾ ಪರಿವಾರಗಳಾಗಿ ವಿಂಗಡಿಸಿದ್ದಾರೆ. ಅವುಗಳಲ್ಲಿ ಸಂಸ್ಕೃತ, ಗ್ರೀಕ್, ಲ್ಯಾಟಿನ್, ಇಂಗ್ಲಿಷ್, ಫ್ರೆಂಚ್ ಮೊದಲಾದ ಭಾಷೆಗಳನ್ನೊಳಗೊಂಡ ಪ್ರಪಂಚದ ಬಹು ದೊಡ್ಡ ಭಾಷಾ ಪರಿವಾರವೆಂದರೆ 'ಇಂಡೋ-ಯುರೋಪಿಯನ್ ಭಾಷಾವರ್ಗ. ಭಾರತದಲ್ಲಿರುವ ಕನ್ನಡ, ತೆಲುಗು, ತಮಿಳು ಮೊದಲಾದ ಸುಮಾರು 25 ಪ್ರಧಾನ ಹಾಗೂ 50 ಉಪ ಭಾಷೆಗಳ ಒಟ್ಟು 75 ಭಾಷೆಗಳುಳ್ಳ ದ್ರಾವಿಡ ಭಾಷಾವರ್ಗ ನಮಗೆ ಪ್ರಸ್ತುತ.

**(ಅ) ಪ್ರಮುಖ ದ್ರಾವಿಡ ಭಾಷೆಗಳು : 25**

೧. ಕನ್ನಡ, ೨. ತೆಲುಗು, ೩. ತಮಿಳು, ೪. ಮಲೆಯಾಳಂ, ೫. ತುಳು, ೬. ಕೊಡವ, ೭. ತೊದ, ೮. ಕೋತ, ೯. ಇರುಳ, ೧೦. ಕೊರಗ, ೧೧. ಗೋಂದಿ, ೧೨. ಕೊಂಡ, ೧೩. ಕುಇ, ೧೪. ಕುವಿ, ೧೫. ಕುಬಿ, ೧೬. ಪೆಂಗೊ, ೧೭. ಮಂಡ, ೧೮. ಇಂದಿ, ೧೯. ಕೊಲಾಮಿ, ೨೦. ನಾಯ್ಕ, ೨೧. ಪರ್ಜಿ, ೨೨. ಗದಬ. ೨೩. ಕುರುಖ್, ೨೪. ಮಾಲ್ತೊ, ೨೫. ಬ್ರಾಹುಈ.

**(ಆ) ಕ್ಷುಲ್ಲಕ ಉಪಭಾಷೆಗಳು : 50**

ಕಸಬ, ಜೇನು ಕುರುಂಬ, ಕಾಡ, ಬೆಳಾರಿ ಮೊದಲಾದವುಗಳು.

## ಕನ್ನಡ ವರ್ಣಮಾಲೆಯಲ್ಲಿ ಅಕ್ಷರಗಳು : ಹಿಂದೆಷ್ಟು ಇದ್ದುವು ಈಗೆಷ್ಟು ಬೇಕು?

ಸಂಗೀತದಲ್ಲಿ 'ಸರಿಗಮಪದನಿ' ಎಂಬ ಸಪ್ತಸ್ವರಗಳಿಗೆ ಸಪ್ತ ಬೀಜಾಕ್ಷರಗಳಿ
ವಂತೆ ಪ್ರಪಂಚದ ಪ್ರತಿಯೊಂದು ಶಿಷ್ಟ ಭಾಷೆಗೂ ಅದರದೇ ಆದ ಒಂದು ವರ್ಣ
ಮಾಲೆ ಇದೆ. ವರ್ಣ ಅಥವಾ ಅಕ್ಷರ ಎಂಬುದು ಬಾಯಿಂದ ಬರುವ ಧ್ವನಿಗಿ
ಲಿಪಿರೂಪ. ಧ್ವನಿ ಅಥವಾ ಶಬ್ದ ಅಮೂರ್ತರೂಪಿ. ಅಕ್ಷರ ಸಂಕೇತವುಳ್ಳ ಲಿ
ಮೂರ್ತರೂಪ, ಉಚ್ಚರಿಸಿದ ನುಡಿಯನ್ನು ಗಾಳಿಯಲ್ಲಿ ತೇಲಿಬಿಟ್ಟರೆ, ಅದ
ಗಾಳಿಯಲ್ಲಿ ಗಾಳಿಯಾಗಿ ಮಂಗಮಾಯವಾಗುತ್ತದೆ. ಅದನ್ನು ಲಿಪಿರೂಪದ
ಸೆರೆಹಿಡಿದರೆ ಮಿಂಚಿಮಾಯವಾಗುವ ಮಾತು ಮೂರ್ತಿತ್ವ ಪಡೆಯುತ್ತದೆ. ಅಂತ
ಸ್ತುತ್ಯ ಪ್ರಯತ್ನದ ಫಲವೇ ಲಿಪಿ. ಅದರ ಮೂಲ ಬೀಜಾಕ್ಷರಗಳೇ ವರ್ಣ ಅಥವ
ಅಕ್ಷರಗಳು.

ಸಾಮಾನ್ಯವಾಗಿ, ಲಿಪಿಯುಳ್ಳ, ಇತಿಹಾಸವುಳ್ಳ, ಸಾಹಿತ್ಯ ಸಂಪದವುಳ್ಳ ಭಾ
ಗಳನ್ನು ಶಿಷ್ಟ ಭಾಷೆ (Cultivated Languages)ಎಂದು ಕರೆಯುತ್ತಾರೆ. ಇಂತ
ಶಿಷ್ಟ ಭಾಷೆಗಳು–ನಾವು ಮೊದಲೇ ಹೇಳಿದಂತೆ–ತಮ್ಮವೇ ಆದ ವರ್ಣಮಾಲೆಗಳನ
ರೂಪಿಸಿಕೊಂಡಿವೆ ತಮ್ಮ ಭಾಷಾಜಾಯಮಾನಕ್ಕೆ ಧ್ವನಿ–ಧ್ವನಿಮಾಗಳಿಗನುಗು
ವಾಗಿ. ದ್ರಾವಿಡ ಭಾಷಾ ಪರಿವಾರದ ಪ್ರಮುಖ ಭಾಷೆಯಾಗಿದ್ದರೂ ಕನ್ನಡ
ಸಂಸ್ಕೃತ, ಪ್ರಾಕೃತ ಮೊದಲಾದವುಗಳಂತೆ ಬ್ರಾಹ್ಮೀ ಲಿಪಿಯಿಂದ ರೂಪುಗೊಂಡಿ
ಆದರೆ ಇಂದು ಅದರ ಆಕೃತಿ ಗುರುತಿಸಲಾಗದಷ್ಟು ಬದಲಾಗಿದೆ ಬ್ರಾಹ್ಮಿಯಿಂ
ಪ್ರಸ್ತುತದಲ್ಲಿ ಕನ್ನಡ ವರ್ಣಮಾಲೆಯ ಜಾತಕ ನೋಡೋಣ :

1. ಕನ್ನಡ ವರ್ಣಮಾಲೆಯನ್ನು ಸ್ವರ, ವರ್ಗೀಯ ವ್ಯಂಜನ, ಅವರ್ಗೀಯ
ವ್ಯಂಜನ, ಯೋಗವಾಹ, ದೇಶೀಯಾಕ್ಷರ–ಎಂದು ಐದು ಭಾಗಗಳಾಗಿ ವಿಂಗಡಿ
ಬಹುದು. ಕೇಶಿರಾಜ ಈ ವರ್ಗಗಳನ್ನು ಆಧರಿಸಿ, ಸಂಸ್ಕೃತ ಮತ್ತು ಕನ್ನ
ಎರಡೂ ಭಾಷೆಗಳ ಅಕ್ಷರಗಳನ್ನು ಸೇರಿಸಿ ಒಂದು ವರ್ಣಮಾಲೆಯನ್ನು ಮೊದಲ
ಸಿದ್ಧಪಡಿಸಿ, ಅನಂತರ ಹತ್ತು ಅಕ್ಷರಗಳನ್ನು ಕಳೆದು, ಕನ್ನಡದಲ್ಲಿ ನಲವತ್ತೇ
ಅಕ್ಷರಗಳಿವೆ ಎನ್ನುತ್ತಾನೆ. ಅವುಗಳ ವಿವರ ಹೀಗಿದೆ :

1. ಸ್ವರಗಳು : ಅ, ಆ, ಇ, ಈ, ಉ, ಊ, ಋ, ೠ, ಌ, ೡ,
   ಏ, ಐ, ಓ, ಔ 1
2. ವರ್ಗೀಯ ವ್ಯಂಜನಗಳು : ಕ ಖ ಗ ಘ ಙ
   ಚ ಛ ಜ ಝ ಞ
   ಟ ಠ ಡ ಢ ಣ
   ತ ಥ ದ ಧ ನ
   ಪ ಫ ಬ ಭ ಮ 2

3. ಅವರ್ಗೀಯ ವ್ಯಂಜನಗಳು: ಯ, ರ, ಲ, ವ, ಶ, ಷ, ಸ, ಹ, (ಳ) ಳ 9
4. ಯೋಗವಾಹಗಳು : ಬಿಂದು ಅಥವಾ ಅನುಸ್ವಾರ (ಂ)
ವಿಸರ್ಗ ಅಥವಾ ವಿಸರ್ಜನೀಯ (ಃ)
ಜಿಹ್ವಾಮೂಲೀಯ ($X_k$) 4
ಉಪಾಧ್ಮಾನೀಯ (ೲ)
5. ದೇಶೀಯಾಕ್ಷರಗಳು : ಎ, ಒ, ಱ, ೞ, (ಕು) ಳ 5

---

ಇವುಗಳಲ್ಲಿ ಸಂಸ್ಕೃತದವುಗಳೆಂಬ— 57

ಋ, ೠ, ಌ, ೡ, ಶ, ಷ, ವಿಸರ್ಗ (ಃ), $X_k$, ೲ,
ಸಂಸ್ಕೃತದ 'ಲ'ಕಾರಕ್ಕೆ ಬದಲಾಗಿ ಬಳಕೆಯಾಗುವ (ಳ) ಳ
ಒಟ್ಟು ಹತ್ತು ಅಕ್ಷರಗಳನ್ನು ಕೇಶಿರಾಜ ತೆಗೆದು ಹಾಕುತ್ತಾನೆ 10

---

ಈಗ 'ನಾಲ್ವತ್ತೇಳಕ್ಕರಂಗಳೆ ಶುದ್ಧಗೆ ಅಚ್ಚಗನ್ನಡಕ್ಕೀ
ಕ್ರಮದೊಳ್' ಎನ್ನುತ್ತಾನೆ. 47

---

ಆದರೆ,

ಕನ್ನಡ ವರ್ಣಮಾಲೆಯಲ್ಲಿ ೪೭ ಶುದ್ಧಾಕ್ಷರಗಳಿಲ್ಲ.
ಇವು ಸಂಸ್ಕೃತದ ಪ್ರಭಾವದಿಂದ ಬಂದವುಗಳು

(i) ಸ್ವರಗಳ ಐ ಮತ್ತು ಔ ಸಂಯುಕ್ತಾಕ್ಷರಗಳಿಲ್ಲ :

ಬದಲಿಗೆ, ಇವು ಸಂಸ್ಕೃತದ ಅಕ್ಷರಗಳು, ಕನ್ನಡದಲ್ಲಿ ಅವುಗಳನ್ನು 'ಅಯ್' ಎಂತಲೂ 'ಅವ್' ಎಂತಲೂ ಬರೆಯಬಹುದು. ಹಿಂದೆ ಬರೆಯುತ್ತಿದ್ದುದೂ ಹಾಗೆಯೇ. ಆದ್ದರಿಂದ ಶುದ್ಧ ಕನ್ನಡ ವರ್ಣಮಾಲೆಯಲ್ಲಿ ಐ, ಔಗಳಿಲ್ಲ. 2

---

45

---

(ii) ಮಹಾಪ್ರಾಣಾಕ್ಷರಗಳಿಲ್ಲ

ವರ್ಗೀಯ ವ್ಯಂಜನಗಳಲ್ಲಿ ಮಹಾಪ್ರಾಣಾಕ್ಷರಗಳಿಲ್ಲ ಕನ್ನಡದಲ್ಲಿ. ಕೇಶಿರಾಜ 'ಬಳಸವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟ ಭಾಷೆಯೊಳ್' ಎಂದು ಹೇಳುತ್ತಾನೆ. ವರ್ಗದ ದ್ವಿತೀಯ ಮತ್ತು ಚತುರ್ಥಾಕ್ಷರಗಳು ಮಹಾಪ್ರಾಣಗಳು ಎಂದು ಹೇಳಿ, ಅವು ಸಂಖ್ಯೆ ಮತ್ತು ಅನುಕರಣದಲ್ಲಿವೆ ಎನ್ನುತ್ತಾನೆ. ತನ್ನ ಸೂತ್ರಕ್ಕೆ ಪ್ರಯೋಗವಾಗಿ 'ಇರ್ಛಾಸಿರಂ' 'ಧಿಡೀರನೆ' ಮೊದಲಾದ ಪದಗಳನ್ನು ಕೊಡುತ್ತಾನೆ. ಆದರೆ ಇಲ್ಲಿನ ಇವು ಶುದ್ಧ ಕನ್ನಡ ಪದಗಳಲ್ಲ. ಇರ್ + ಸಾಸಿರ = ಇರ್ಛಾಸಿರ ಆಗಿದೆ.

(ಎರಡು + ಸಾವಿರ)

'ಇರ್' ಕನ್ನಡ ಶಬ್ದ, ಸಾಸಿರ ಎಂಬುದು 'ಸಹಸ್ರದ' ತದ್ಭವ. ಇವೆರಡೂ ಸೇರಿದಾಗ 'ಛ' ಎಂಬ ಮಹಾಪ್ರಾಣ ನಿಷ್ಪನ್ನಗೊಳ್ಳುವ ಸಾಧ್ಯತೆ ಇದೆ. ಆದರೆ ಎರಡೂ ಶುದ್ಧ ಕನ್ನಡ ಪದಗಳಾದರೆ ಮಹಾಪ್ರಾಣ ಬರಲು ಸಾಧ್ಯವಿಲ್ಲ. ನೋಡಿ: ಇರ್+ಪತ್ತು = ಇಪ್ಪತ್ತು ಆಯಿತು. ಇರ್ಫತ್ತು ಆಗಲಿಲ್ಲ. ಅಂದರೆ ಮಹಾಪ್ರಾಣ (ಎರಡು ಹತ್ತು)

ಆಗಲಿಲ್ಲ. ಕಾರಣ ಇರ್ ಮತ್ತು ಪತ್ತು ಎರಡೂ ಶುದ್ಧ ಕನ್ನಡ ಪದಗಳು. ಆದ್ದರಿಂದ ತದ್ಭವ ಪದಗಳು ಒಂದು ಭಾಷೆಯ ವೈಶಿಷ್ಟ್ಯಗಳಲ್ಲ.

ಕೇಶಿರಾಜ 'ವಖ್ಖಾಣ' ಉದಾಹರಣೆ ಕೊಡುತ್ತಾನೆ. ಇದು ಸಂಸ್ಕೃತದ ವ್ಯಾಖ್ಯಾನ' ಪದದ ತದ್ಭವ ಶಬ್ದ.

ಎರಡನೆಯದು, 'ಧಿಡೀರ್' ಇದು ಅನುಕರಣ ಶಬ್ದ. ಅನುಕರಣ ಶಬ್ದವೂ ಒಂದು ಭಾಷೆಯ ವೈಶಿಷ್ಟ್ಯ ಆಗಲಾರದು. ಅವನ್ನು 'ದಿಡೀರನೆ' ಎಂದೇ ಉಚ್ಚರಿಸುತ್ತಾರೆ ಕನ್ನಡಿಗರು. ಅಂತೆಯೇ ಕೇಶಿರಾಜ ಕೊಡುವ ಯಾವ ಪದವೂ ಶುದ್ಧ ಕನ್ನಡ ಅಲ್ಲ. ಆದ್ದರಿಂದ ಕನ್ನಡವಲ್ಲಿ ಮಹಾಪ್ರಾಣಗಳಿಲ್ಲ ಕನ್ನಡವಷ್ಟೇ ಅಲ್ಲ ದ್ರಾವಿಡದಲ್ಲೇ ಇಲ್ಲ. ಉದಾಹರಣೆಗೆ.

(ಅ) ದ್ರಾವಿಡ ಭಾಷೆಗಳ ಪ್ರತಿನಿಧಿ ಭಾಷೆಯಾಗಿರುವ ತಮಿಳಿನಲ್ಲಿ ವರ್ಗೀಯಾಕ್ಷರಗಳೇ ಇಲ್ಲ.

ಕ ಙ ಚ ಞ
ಟ ಣ ತ ನ
ಪ ಮ

ಈ ಹತ್ತೇ ಅಕ್ಷರಗಳಿರುವುದು. ಇಲ್ಲಿ 'ಗಜಡದಬ' ಎಂಬ ಘೋಷ ಧ್ವನಿಮಾಗಳನ್ನು ಉಳಿಸಿಕೊಂಡರೂ ಹತ್ತು ಮಹಾಪ್ರಾಣಗಳಂತೂ ಇಲ್ಲವೇ ಇಲ್ಲ.

(ಆ) ಮಹಾಪ್ರಾಣಾಕ್ಷರಗಳುಳ್ಳ ಒಂದು ಪದವೂ ಕನ್ನಡದಲ್ಲಿಲ್ಲ.

(ಇ) ಕನ್ನಡ ಮಕ್ಕಳಾಗಲಿ, ಗ್ರಾಮೀಣ ವ್ಯಕ್ತಿಯಾಗಲಿ ಮಹಾಪ್ರಾಣಾಕ್ಷರಗಳ ಉಚ್ಚಾರಣೆಯನ್ನೇ ಅರಿಯರು. ಎಷ್ಟು ಬಾರಿ ಹೇಳಿಕೊಟ್ಟರೂ 'ಭಾರತ ಭಾಗ್ಯವಿದಾತ'ಎಂತಲೇ ಹೇಳಿಯಾನು ಭಾಷಾ ವಿಜ್ಞಾನಿಗೆ ಪ್ರಕೃತಿಗೆ ಹತ್ತಿರವಿರುವ ನಿರಕ್ಷರಕುಕ್ಷಿಯೇ ಪ್ರಮಾಣ ಭೂತವ್ಯಕ್ತಿಯಾದ್ದರಿಂದ, ಅವನ ಬಾಯಲ್ಲಿ ಮಹಾಪ್ರಾಣ ಉಚ್ಚಾರವಿಲ್ಲದಿರುವುದರಿಂದ ಕನ್ನಡವಲ್ಲಿ ಮಹಾಪ್ರಾಣಾಕ್ಷರಗಳಿಲ್ಲ.

ಹತ್ತು ಅಕ್ಷರಗಳನ್ನು ಕಳೆದರೆ 10

---

35

(ಈ) ಕಂಭ, ಭತ್ತ,ಭಂಗಾರ, ಧಾಳಿ, ಭಾವಿ, ದೊರೆ–ಮೊದಲಾದ ಪದಗಳನ್ನು ಕೆಲವರು ಬಳಸುತ್ತಾರೆ. ಅಂದಾಕ್ಷಣಕ್ಕೇ ಇವು ಶುದ್ಧ ಪ್ರಯೋಗಗಳಲ್ಲ, ಭ್ರಮೆಯಿಂದ ಬಂದ ಪದಗಳು.

ಒಟ್ಟಿನಲ್ಲಿ ಕನ್ನಡದಲ್ಲಿ ಅರ್ಥಾತ್ ದ್ರಾವಿಡದಲ್ಲಿ

ಮಹಾಪ್ರಾಣಾಕ್ಷರಗಳಿಲ್ಲ

**(iii) ಅವರ್ಗೀಯ ವ್ಯಂಜನಗಳಲ್ಲಿ 'ಹ'ಕಾರ ಇಲ್ಲ :**

ಇದು ಪರುಷಾಕ್ಷರ, ಪಕಾರವೇ ದ್ರಾವಿಡ ವರ್ಣ. ಇಂದಿಗೂ ತಮಿಳು ಮೊದಲಾದ ದ್ರಾವಿಡ ಭಾಷೆಗಳು ಇಟ್ಟುಕೊಂಡಿವೆ. ಆದರೆ ಕನ್ನಡ 'ಪ'ಕಾರ'ಹ'ಕಾರವಾಗಿ ಬದಲಾಯಿಸಿತು. ಬಹುಶಃ ಇದೂ ಸಂಸ್ಕೃತದ ಪ್ರಭಾವ ಇದ್ದಿರಬಹುದು. ಆದ್ದರಿಂದ ಹಕಾರ ಇಲ್ಲ, 1

---

34

---

**(iv) ಯೋಗವಾಹಗಳಲ್ಲಿ ಬಿಂದು ಅಥವಾ ಅನುಸ್ವಾರ(ಂ) ಇಲ್ಲ :**

ಬಿಂದು ಸಂಸ್ಕೃತದಿಂದ ಬಂದದ್ದು. ಕನ್ನಡದ್ದಲ್ಲ ಆದ್ದರಿಂದ 1

---

33

---

ಹೀಗೆ ಕನ್ನಡದಲ್ಲಿ ಶುದ್ಧಾಕ್ಷರಗಳು 33 ಎಂದು ನಿರ್ಧರಿಸಬಹುದು. ಆದರೆ ಕನ್ನಡ ನಡುಗನ್ನಡ ಕಾಲಕ್ಕಾಗಲೇ ದ್ರಾವಿಡ ವರ್ಣಗಳಾದ ಱ, ೞ.ಗಳನ್ನು ಕೈಬಿಟ್ಟಿರುವುದರಿಂದ, ಅವನ್ನುಳಿದು, ಸಂಸ್ಕೃತದಂತೆ, ಇಂಗ್ಲಿಷ್, ಉರ್ದು, ಪರ್ಷಿಯನ್ ಮೊದಲಾದ ಅನ್ಯಭಾಷಾ ಸಂಪರ್ಕವನ್ನು ಇಟ್ಟುಕೊಂಡು, ತನ್ನ ಶಬ್ದಕೋಶವನ್ನು ವೃದ್ಧಿಪಡಿಸಿಕೊಂಡು ಬೆಳೆಯುತ್ತಿರುವ ಜೀವಂತ ಭಾಷೆಯಾದ ಕನ್ನಡ ಜ, ಫ ಅಕ್ಷರಗಳನ್ನೂ ತನ್ನ ಹೊಸ ವರ್ಣಮಾಲೆಯಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ, ಅದರ ಅಗತ್ಯತೆಯೂ ಇದೆ. ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ಹೊಸಗನ್ನಡ ವರ್ಣಮಾಲೆಯನ್ನು ಹೀಗೆ ಸಿದ್ಧಪಡಿಸಬಹುದು.

1. ಸ್ವರಗಳು : ಅ, ಆ, ಇ, ಈ, ಉ, ಊ, ಋ, ೠ, ಎ, ಏ, ಐ, ಒ, ಓ, ಔ, 14
2. ವರ್ಗೀಯ ವ್ಯಂಜನಗಳು : ಕ ಖ ಗ ಘ ಙ ಚ ಛ ಜ ಝ ಞ
   ಟ ಠ ಡ ಢ ಣ ತ ಥ ದ ಧ ನ
   ಪ ಫ ಬ ಭ ಮ 25
3. ಅವರ್ಗೀಯ ವ್ಯಂಜನಗಳು : ಯ, ರ, ಲ, ವ, ಶ, ಷ, ಸ, ಹ, ಳ 9
4. ಯೋಗವಾಹಗಳು ಅನುಸ್ವಾರ (ಂ) ಮತ್ತು ವಿಸರ್ಗ (ಃ) 2
5. ಅನ್ಯಭಾಷಾ ವರ್ಣಗಳು. ಜ಼, ಫ಼, 2

---

52

# ಐ. ಎ. ಎಸ್. ಪ್ರಶ್ನ ಪತ್ರಿಕೆಗಳು

1979

KANNADA

Paper—I

(Literature)

Time Allowed ; Three Hours) (Maximum Marks : 300

Candidates should attempt FIVE questions, choosing not more then FIVE from each part.

All questions carry equal marks

Answer must be written in KANNADA,

PART—I

1. ದ್ರಾವಿಡ ಭಾಷಾವರ್ಗದ ವೈಶಿಷ್ಟಗಳೇನು ? ಕನ್ನಡವನ್ನು ಈ ವರ್ಗಕ್ಕೆ ಸೇರಿದ ಯಾವುದಾದರೂ ಪ್ರಮುಖ ಭಾಷೆಯೊಡನೆ ಹೋಲಿಸಿ.
2. ಕನ್ನಡ ಭಾಷೆಯ ವಿವಿಧ ಹಂತಗಳು ಯಾವುವು ? ಅವುಗಳ ಸ್ವರೂಪ ಲಕ್ಷಣಗಳನ್ನು ವಿವರಿಸಿ.
3. ಕನ್ನಡ ವರ್ಣಮಾಲೆಯು ಬೆಳೆದು ಬಂದ ರೀತಿಯನ್ನು ವಿಶ್ಲೇಷಿಸಿ,ಆಧುನಿಕ ಕನ್ನಡಕ್ಕೆ ಈ ವರ್ಣಮಾಲೆ ಎಷ್ಟರ ಮಟ್ಟಿಗೆ ಸಮರ್ಪಕವಾಗಿದೆಯೆಂಬುದನ್ನು ವಿವೇಚಿಸಿ.
4. ಕೆಳಗಿನವುಗಳಲ್ಲಿ **ಐದಕ್ಕೆ** ಟಿಪ್ಪಣಿ ಬರೆಯಿರಿ :
   1) ಮಹಾ ಪ್ರಾಣಗಳು
   2) ಅಭಿವ್ಯಾಪಕ ಮತ್ತು ವ್ಯಾವರ್ತಕ ರೂಪ (Inclcive & Exclusive form)
   3) ಕನ್ನಡದಲ್ಲಿ ಲಿಂಗ ವಿವಕ್ಷೆ
   4) ನಿಷೇಧ ಕ್ರಿಯೆ
   5) ವರ್ತಮಾನ ಪೂರ್ಣ ಕ್ರಿಯೆ
   6) ವಿಭಕ್ತಿ ಪ್ರತ್ಯಯಗಳು
   7) ಪ್ರಾದೇಶಿಕ ಕನ್ನಡ ಪ್ರಭೇದಗಳು
5. ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಮತ್ತು ಅದರಿಂದಾದ ಪರಿಣಾಮದ ಬಗ್ಗೆ ಒಂದು ಪ್ರಬಂಧವನ್ನು ಬರೆಯಿರಿ.

## 1980

### PART-I

1. 'ದ್ರಾವಿಡ' ಮತ್ತು 'ಕನ್ನಡ' ಎಂಬ ಪದಗಳ ಅರ್ಥವನ್ನು ವಿವರಿಸಿ. ಕನ್ನಡ ಭಾಷೆಯನ್ನು ದ್ರಾವಿಡ ಭಾಷಾ ವರ್ಗಕ್ಕೆ ಸೇರಿಸಲು ಕಾರಣಗಳು ಯಾವುವೆಂದು ವಿಶದಪಡಿಸಿರಿ.
2. ಭಾಷಾ ದೃಷ್ಟಿಯಿಂದ ಕನ್ನಡ ಮತ್ತು ತಮಿಳು ಅಥವಾ ಕನ್ನಡ ಮತ್ತು ತೆಲುಗು ಇವುಗಳ ನಡುವಣ ಸಾಮ್ಯ ಮತ್ತು ವ್ಯತ್ಯಾಸಗಳನ್ನು ಚರ್ಚಿಸಿರಿ.
3. ಕನ್ನಡದಲ್ಲಿ ಎಷ್ಟು ವರ್ಣಗಳಿವೆ ? ಈಗಿರುವ ವರ್ಣ ಮಾಲೆಯನ್ನು ಸುಧಾರಿಸಬೇಕಾದ ಅಗತ್ಯವಿದೆಯೆ ? - ವಿವೇಚಿಸಿರಿ,
4. ಕೆಳಗಿನವುಗಳಲ್ಲಿ ಯಾವುದಾದರೂ ಐದಕ್ಕೆ ಟಿಪ್ಪಣಿ ಬರೆಯಿರಿ :
   1) ಪೂರ್ವದ ಹಳಗನ್ನಡ
   2) ಅಚ್ಚಗನ್ನಡ
   3) ಲಿಂಗ-ವಚನ ವ್ಯವಸ್ಥೆ
   4) ವಿಭಕ್ತಿ ಪಲ್ಲಟ
   5) ಆಖ್ಯಾತ ಪ್ರತ್ಯಯಗಳು
   6) ಗುಣ ವಚನಗಳು
   7) ಕನ್ನಡ ಉಪಭಾಷೆಗಳು
   8) ಕರ್ಮಣಿ ಪ್ರಯೋಗ
   9) ಸರ್ವನಾಮಗಳು
   10) ಕಾಲವಾಚಕಗಳು
5. ಕನ್ನಡಕ್ಕೆ ಅನ್ಯ ಭಾಷಾ ಸಂಪರ್ಕವೊದಗಿದುದನ್ನು ಕುರಿತು ಸ್ಥೂಲ ವಿವೇಚನೆ ಮಾಡಿರಿ :

## 1981

### PART-I

1. ದ್ರಾವಿಡ ಭಾಷೆಗಳ ಸಾಮಾನ್ಯ ವೈಶಿಷ್ಟ್ಯಗಳೇನು? ದ್ರಾವಿಡ ವರ್ಗದಲ್ಲಿ ಕನ್ನಡದ ಸ್ಥಾನವೇನೆಂದು ನಿರ್ದೇಶಿಸಿರಿ.
2. ಕನ್ನಡದ ವರ್ಣಮಾಲೆಯಲ್ಲಿ ಇರಬೇಕಾದ ಅಕ್ಷರಗಳೆಷ್ಟು? ವೈಯಾಕರಣರ ಅಭಿಪ್ರಾಯಗಳ ಹಿನ್ನೆಲೆಯಿಂದಲೂ ಆಧುನಿಕ ಕನ್ನಡದ ದೃಷ್ಟಿಯಿಂದಲೂ ಪರಿಶೀಲಿಸಿರಿ.

3. ಕನ್ನಡದ ಲಿಂಗ ವಿಭಜನೆಯನ್ನು ವಿವರಿಸಿ, ಅದನ್ನು ಯಾವುದಾದರೂ ಪ್ರಮುಖ ದ್ರಾವಿಡ ಭಾಷೆಯೊಂದಿಗೆ ಹೋಲಿಸಿರಿ.
4. ಕೆಳಗಿನವುಗಳಲ್ಲಿ ಯಾವುದಾದರೂ ಐದಕ್ಕೆ ಟಿಪ್ಪಣಿ ಬರೆಯಿರಿ
   1) ಶಿಥಿಲದ್ವಿತ್ವ
   2) ವಚನ ಪ್ರತ್ಯಯಗಳು
   3) ವಿಧ್ಯರ್ಥಕ ಕ್ರಿಯೆ
   4) ಉತ್ತಮ ಪುರುಷ ಬಹುವಚನ ರೂಪ
   5) ವಿಶೇಷಣಗಳು
   6) ವಿಭಕ್ತಿ ಪಲ್ಲಟ
   7) ಭೂತಕಾಲ ವಾಚಕಗಳು
   8) ನಿಷೇಧ ಕ್ರಿಯಾಪದಗಳು
   9) ಅರ್ಥ ವ್ಯತ್ಯಾಸ
   10) ಕನ್ನಡದ ಸಾಮಾಜಿಕ ಮತ್ತು ಭೌಗೋಳಿಕ ಉಪಭಾಷೆಗಳು
5. ಅನ್ಯ ಭಾಷೆಗಳ ಸಂಪರ್ಕದಿಂದ ಕನ್ನಡದಲ್ಲಾದ ಬದಲಾವಣೆಯೇನು ? ಉದಾಹರಣೆಗಳ ಪೂರ್ವಕ ವಿವರಿಸಿರಿ.

## 1982

## PART–I

1. ಭಾಷೆ ಎಂದರೇನು ? ಪ್ರಪಂಚದ ಭಾಷೆಗಳನ್ನು ಎಷ್ಟು ವರ್ಗಗಳಾಗಿ ವಿಂಗಡಿಸಬಹುದು ? ವಿವರಿಸಿ.
2. ಕನ್ನಡ ಭಾಷೆಯ ಚರಿತ್ರೆಯ ಪ್ರಮುಖ ಘಟ್ಟಗಳನ್ನು ಉದಾಹರಣೆಗಳ ಸಮೇತ ವಿವರಿಸಿ.
3. ಕನ್ನಡ ಭಾಷೆಯ ಶಬ್ದಕೋಶದ ಮೇಲೆ ಆಗಿರುವ ಅನ್ಯಭಾಷೆಗಳ ಪ್ರಭಾವವನ್ನು ಗುರುತಿಸಿ.
4. ಕೆಳಗಿನವುಗಳಲ್ಲಿ ಯಾವುದಾದರೂ ಐದಕ್ಕೆ ಟಿಪ್ಪಣಿ ಬರೆಯಿರಿ :
   1. ಕನ್ನಡದಲ್ಲಿ ಅರ್ಥ ವ್ಯತ್ಯಾಸಗಳು
   2. ಮಹಾ ಪ್ರಾಣಗಳು
   3. ಕರ್ಮಣಿ ಪ್ರಯೋಗ
   4. ಪ್ರಥಮಾ ವಿಭಕ್ತಿ
   5. ಬ್ರಾಹ್ಮೀಲಿಪಿ ಮತ್ತು ಕನ್ನಡ ಲಿಪಿ
   6. ದ್ರಾವಿಡದಲ್ಲಿ ಲಿಂಗ ವ್ಯವಸ್ಥೆ

7. ರಳ ಮತ್ತು ಶಕಟ ರೇಫಸ್ವನಗಳು
8. ಗುಣವಾಚಕಗಳು
9. ಕೇಶಿರಾಜ
10. ವಿಭಕ್ತಿ ಪಲ್ಲಟ

5. ಕನ್ನಡ ಭಾಷೆಯ ಪ್ರಾದೇಶಿಕ ಉಪಭಾಷೆಗಳನ್ನು ಕುರಿತು ಒಂದು ಸಮೀಕ್ಷೆಯನ್ನು ಬರೆಯಿರಿ.

## 1983

## PART - I

1. ಭಾರತದಲ್ಲಿರುವ ಭಾಷಾವರ್ಗಗಳು ಯಾವುವು ? ಅವುಗಳಲ್ಲಿ ಕನ್ನಡ ಯಾವ ಗುಂಪಿಗೆ ಸೇರುತ್ತದೆ ? ಸಕಾರಣವಾಗಿ ವಿವರಿಸಿರಿ.
2. ಒಳವು ಮಹಾಪ್ರಾಣಂಗಳ್ ಕೆಲವು ನಿಜೋಜ್ವಳವಾಗಿ ವಿಳಸತ್ಕರ್ಣಾಟ ಭಾಷೆಯೊಳ್'— ಎಂಬ ಕೇಶಿರಾಜನ ಮಾತನ್ನು ವಿಮರ್ಶಿಸಿ, ಕನ್ನಡಕ್ಕೆ ಬೇಕಾಗುವ ಅಕ್ಷರಗಳು ಎಷ್ಟು ಎಂದು ಹಳೆ ಮತ್ತು ಹೊಸ ದೃಷ್ಟಿಯಿಂದ ಪರಿಶೀಲಿಸಿ.
3. ಕನ್ನಡಕ್ಕೆ ಅನ್ಯಭಾಷೆಗಳ ಪದಗಳು ಎರವಲಾಗಿ ಬಂದರೂ, ಅದರ ಆಂತರಿಕ ರಚನೆಯಲ್ಲಿ ಬದಲಾವಣೆಯೇನೂ ಆಗಿಲ್ಲ — ಎಂಬ ಮಾತನ್ನು ಚರ್ಚಿಸಿರಿ.
4. ಕೆಳಗಿನವುಗಳಲ್ಲಿ ಯಾವುದಾದರೂ ಐದಕ್ಕೆ ಟಿಪ್ಪಣಿ ಬರೆಯಿರಿ :
   1. ಕನ್ನಡದ ವೈಯಾಕರಣರು
   2. ಅಚ್ಚಗನ್ನಡ
   3. ಕನ್ನಡ ಸಂಧಿಗಳು
   4. ಆಖ್ಯಾತ ಪ್ರತ್ಯಯಗಳು
   5. ಷಷ್ಠೀ ವಿಭಕ್ತಿ ಮತ್ತು ಕಾರಕ ಸಂಬಂಧ
   6. ವರ್ತಮಾನ ಪೂರ್ಣಕ್ರಿಯೆ
   7. ಸತಿಸಪ್ತಮಿ
   8. ಗಮಕ ಸಮಾಸ
   9. ಕರ್ಮಣಿ ಪ್ರಯೋಗ
   10. ಕನ್ನಡದ ಅವಸ್ಥಾಂತರಗಳು
5. ಕನ್ನಡದ ಮುಖ್ಯವಾದ ಪ್ರಾಂತಿಕ(ರೀಜನಲ್) ಮತ್ತು ಸಾಮಾಜಿಕ (ಸೋಷಿಯಲ್) ಪ್ರಭೇದಗಳ ವೈಶಿಷ್ಟ್ಯಗಳನ್ನು ಗುರುತಿಸಿ, ಇವುಗಳ ನಡುವಣ ಅಂತರವನ್ನು ಕಡಿಮೆ ಮಾಡುವ ಅವಶ್ಯಕತೆಯಿದೆಯೆ ? ವಿಚಾರ ಮಾಡಿರಿ.

## 1984

### PART-I

1. ದ್ರಾವಿಡ ಭಾಷಾ ವಂಶದ ಸಾಮಾನ್ಯ ವೈಲಕ್ಷಣಗಳ ಹಿನ್ನೆಲೆಯಲ್ಲಿ ಅದು ಒಂದು ಸ್ವತಂತ್ರ ಭಾಷಾ ವಂಶವೆಂದು ಕರೆಯಿಸಿಕೊಳ್ಳಲು ಕಾರಣಗಳನ್ನು ವಿವೇಚಿಸಿರಿ.
2. ಕನ್ನಡ ಭಾಷೆಯ ಮೇಲೆ ಆಗಿರುವ ಇತರ ಭಾಷೆಗಳ ಪ್ರಭಾವವನ್ನು ಮತ್ತು ಆ ಪ್ರಭಾವದಿಂದ ಕನ್ನಡ ಭಾಷೆಯ ಶಬ್ದಸಂಪತ್ತು ವೃದ್ಧಿಯಾಗಿರುವುದನ್ನು ಚರ್ಚಿಸಿರಿ.
3. ಟಿಪ್ಪಣಿ ಬರೆಯಿರಿ.
    1. ದ್ರಾವಿಡದಲ್ಲಿ ಲಿಂಗವಚನ
    2. ಕನ್ನಡದಲ್ಲಿ ಅರ್ಥವ್ಯತ್ಯಾಸಗಳು
    3. ಪೂರ್ವದ ಹಳಗನ್ನಡ
    4. ಶಬ್ದಮಣಿದರ್ಪಣ
    5. ಕನ್ನಡದ ಉಪಭಾಷೆಗಳು

## 1985

### PART-I

1. ದ್ರಾವಿಡ ಭಾಷೆಗಳು, ಆರ್ಯನ್ ಭಾಷೆಗಳಿಗಿಂತ ಭಿನ್ನವಾಗಿವೆಯೆಂದು ನಿರ್ಧರಿಸಲು ಇರುವ ಆಧಾರಗಳೇನು ?–ವಿವರಿಸಿ.
2. ದ್ರಾವಿಡ ಭಾಷೆಗಳ ಹಿನ್ನೆಲೆಯಲ್ಲಿ ಕನ್ನಡದ ವೈಶಿಷ್ಟ್ಯವೇನು?–ವಿವರಿಸಿ.
3. ಕನ್ನಡ ಭಾಷೆಯ ಬೆಳವಣಿಗೆಯ ವಿವಿಧ ಹಂತಗಳನ್ನು ಪರಿಚಯಮಾಡಿಕೊಡಿರಿ.
4. ಐದಕ್ಕೆ ಟಿಪ್ಪಣಿ ಬರೆಯಿರಿ.
    1. ಕನ್ನಡದ ಪೂರ್ವ ಚರಿತ್ರೆಯನ್ನು ತಿಳಿಯಲು ದೊರೆಯುವ ಆಧಾರ ಗಳು.
    2. ಕನ್ನಡದಲ್ಲಿ ಲಿಂಗ–ವಚನ ವ್ಯವಸ್ಥೆ
    3. ಕನ್ನಡಕ್ಕೆ ಎರವಲು ಬಂದ ಪದಗಳು
    4. ಕನ್ನಡದ ಪ್ರಾದೇಶಿಕ ಉಪಭಾಷೆಗಳು
    5. ಪಂಚಮಿ ಮತ್ತು ಷಷ್ಠಿ ವಿಭಕ್ತಿಗಳು
    6. ಗಮಕ ಸಮಾಸ
    7. ಕನ್ನಡದಲ್ಲಿ ನಿಷೇಧ ಕ್ರಿಯಾ ರಚನೆ

8. ಕರ್ಮಣೀ ಪ್ರಯೋಗ
9. ತತ್ಸಮ, ಸಮಸಂಸ್ಕೃತ ಮತ್ತು ತದ್ಭವಗಳು
10. ಹಳಗನ್ನಡ ವೈಯಾಕರಣರು

5. ಕನ್ನಡದ ಸರ್ವನಾಮಗಳನ್ನು ಸಮೀಕ್ಷೆ ಮಾಡಿರಿ.

## 1986

### PART – I

1. ಭಾಷಾವರ್ಗೀಕರಣದ ಸೂತ್ರಗಳನ್ನು ವಿಶದಪಡಿಸಿರಿ. ಕನ್ನಡ ಯಾವ ಭಾಷಾ ವರ್ಗಕ್ಕೆ ಸೇರುತ್ತದೆ.
2. ಕನ್ನಡ ಭಾಷೆಯಲ್ಲಿರುವ ಅಕ್ಷರಗಳೆಷ್ಟು ? ಕೇಶಿರಾಜನ ಮತ್ತು ಆಧುನಿಕರ ಅಭಿಪ್ರಾಯಗಳನ್ನು ದೃಷ್ಟಿಯಲ್ಲಿಟ್ಟು ವಿವೇಚಿಸಿರಿ.
3. ಟಿಪ್ಪಣಿ ಬರೆಯಿರಿ.
   ಎ) ಮೂಲ ದ್ರಾವಿಡ
   ಬಿ) ವಿಭಕ್ತಿ ಪಲ್ಲಟ
   ಸಿ) ಶಿಥಿಲದ್ವಿತ್ವ
   ಡಿ) ಕನ್ನಡದಲ್ಲಿ ವರ್ತಮಾನ ಕಾಲದ ಕ್ರಿಯಾಪದ
   ಇ) ಕನ್ನಡದ ಪ್ರಾದೇಶಿಕ ಭಾಷೆಗಳು

## 1987

### PART – I

1 ಭಾಷೆ ಎಂದರೇನು ? ಭಾಷಾ ವರ್ಗೀಕರಣದ ಆಧಾರಗಳನ್ನು ನಿರೂಪಿಸಿ. ದ್ರಾವಿಡ ಭಾಷಾ ವರ್ಗದ ವೈಲಕ್ಷಣ್ಯಗಳನ್ನು ವಿವರಿಸಿ.

2 ಕನ್ನಡ ಭಾಷೆಯ ಮೇಲೆ ಕಾಲಕಾಲಕ್ಕೆ ಪ್ರಭಾವ ಬೀರಿರುವ ಭಾಷೆಗಳು ಯಾವುವು ? ಉದಾಹರಣೆಗಳೊಂದಿಗೆ ಸಮಾಲೋಚಿಸಿ.

3 ಟಿಪ್ಪಣಿ ಬರೆಯಿರಿ
   1 ನಡುಗನ್ನಡ
   2 ಸಮಸಂಸ್ಕೃತ
   3 ಕನ್ನಡ ಭಾಷೆಯಲ್ಲಿ ಲಿಂಗ ವ್ಯವಸ್ಥೆ
   4 ಶಬ್ದಮಣಿದರ್ಪಣ

## 1988

### PART - I

1) ಉಪಭಾಷೆ ಎಂದರೇನು ? ಕನ್ನಡದ ಉಪ ಭಾಷೆಗಳನ್ನು ಸೋದಾಹರಣವಾಗಿ ವಿವರಿಸಿರಿ.

2) ಕನ್ನಡವು ಸಂಸ್ಕೃತ ಜನ್ಯವೆಂದು ಹೇಳುವುದು ಸರಿಯೇ ? ಸಾಧಾರವಾಗಿ ಚರ್ಚಿಸಿರಿ.

3) ಟಿಪ್ಪಣಿ ಬರೆಯಿರಿ.

1 ಪೂರ್ವದ ಹಳಗನ್ನಡ

4 ಪ್ರಥಮಾ ವಿಭಕ್ತಿ, ಪಂಚಮಿ ವಿಭಕ್ತಿ

5 ಪಮಹಪ ಭೇದ

7 ಪ್ರಾಂತ ಭೇದಗಳು

## 1989

### PART – I

1 ಕನ್ನಡ ಭಾಷೆಯ ವೈಲಕ್ಷಣ್ಯಗಳನ್ನು ಇತರ ಪ್ರಮುಖ ದ್ರಾವಿಡ ಭಾಷೆಗಳೊಡನೆ ಹೋಲಿಸಿ ವಿವರಿಸಿರಿ.

2 "ಭಾಷಾ ಸ್ವೀಕರಣ" ಎಂದರೇನು ? ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ಭಾಷಾ ಸ್ವೀಕರಣದ ಪಾತ್ರವನ್ನು ನಿದರ್ಶನಗಳೊಂದಿಗೆ ವಿವೇಚಿಸಿರಿ.

3 ಟಿಪ್ಪಣಿ ಬರೆಯಿರಿ.

1 ಕನ್ನಡದಲ್ಲಿ ಸಾಮಾಜಿಕ ಉಪ ಭಾಷೆಗಳು

2 ಕನ್ನಡದಲ್ಲಿ ಅಭಿವ್ಯಾಪಕ ಮತ್ತು ವ್ಯಾವರ್ತಕ ಸರ್ವನಾಮಗಳು

3 ಅರ್ಥವ್ಯತ್ಯಾಸಗಳು

4 ಭಾಷಾ ವರ್ಗೀಕರಣದ ಮಾರ್ಗದರ್ಶಕ ಸೂತ್ರಗಳು

5 ಕನ್ನಡ ಭಾಷೆಯ ಐತಿಹಾಸಿಕ ಕಾಲಘಟ್ಟಗಳು

## 1990

### PART – I

1. ಕನ್ನಡ ಭಾಷೆಯ ಹುಟ್ಟು ಮತ್ತು ಬೆಳವಣಿಗೆಯ ವಿವಿಧ ಹಂತಗಳನು ನಿದರ್ಶನಗಳೊಂದಿಗೆ ನಿರೂಪಿಸಿರಿ.

2. ಕನ್ನಡ ಭಾಷೆಯ ವಿಭಕ್ತಿಗಳನ್ನು ಸೋದಾಹರಣವಾಗಿ ವಿವರಿಸಿ, ಅವುಗಳ ವಿಷಯಕವಾಗಿ ನಡೆದಿರುವ ಚರ್ಚೆಗಳನ್ನು ಸಂಗ್ರಹಿಸಿ ಬರೆಯಿರಿ.
3. ಟಿಪ್ಪಣಿ ಬರೆಯಿರಿ :—
   i) ದಕ್ಷಿಣ ದ್ರಾವಿಡ ಭಾಷೆಗಳು
   ii) ಕನ್ನಡದ ಪ್ರಾದೇಶಿಕ ಉಪ ಭಾಷೆಗಳು
   iii) 'ಲಿಂಗವೊಂಬತ್ತು ತೆರಂ?'
   iv) ಕನ್ನಡದಲ್ಲಿ ಮಹಾಪ್ರಾಣ ಅಕ್ಷರಗಳು ನಿಜವಾಗಿ ಇವೆಯೆ?
   v) ಸಾಂಸ್ಕೃತಿಕ ಶಬ್ದಕರಣ–ಭಾಷಾ ವ್ಯತ್ಯಾಸ

## 1991

## PART – I

1. ಪೂರ್ವದ್ರಾವಿಡ ಧ್ವನಿಮಾ ವ್ಯವಸ್ಥೆಗಿಂತ ಕನ್ನಡ ಭಾಷೆಯಲ್ಲಿ ಧ್ವನಿಮಾಗಳ ಸಂಖ್ಯೆ ಅಧಿಕ. ಹೀಗಾಗಲು ಕಾರಣಗಳೇನು? ತೌಲನಿಕವಾಗಿ ಚರ್ಚಿಸಿರಿ.
2. ದ್ರಾವಿಡದಲ್ಲಿ ಲಿಂಗವ್ಯವಸ್ಥೆ, 'ಮಹತ್–ಅಮಹತ್' ಭೇದವುಳ್ಳುದಾಗಿದೆ. ಇದು ಸಂಸ್ಕೃತ ಲಿಂಗದ ಕಲ್ಪನೆಗಿಂತ ಭಿನ್ನ – ಸಮಾಲೋಚಿಸಿರಿ.
3. ಇವುಗಳಲ್ಲಿ ಐದಕ್ಕೆ ಟಿಪ್ಪಣಿ ಬರೆಯಿರಿ:
   1. ಉತ್ತರ ದ್ರಾವಿಡ ಭಾಷೆಗಳು
   2. ಕನ್ನಡದಲ್ಲಿ ಪ್ ಹ್ ವ್ಯತ್ಯಾಸ
   3. ಭಾಷೆ, ಉಪಭಾಷೆ, ಪ್ರಮಾಣಭಾಷೆ
   4. ಶಬ್ದಮಣಿದರ್ಪಣದಲ್ಲಿ ಗ್ರಾಂಥಿಕ : ವ್ಯಾವಹಾರಿಕ ರೂಪಗಳು
   5. ಅಂತಃಕೇಂದ್ರೀಯ ಬಹಿಃಕೇಂದ್ರೀಯ ಸಮಾಸಗಳು
   6. ಅರ್ಥವಿಕಾಸ – ಅರ್ಥಸಂಕೋಚ

# ಕೆ. ಎ. ಎಸ್. ಪ್ರಶ್ನ ಪತ್ರಿಕೆಗಳು

## Class I

1984 1. ಕನ್ನಡ ಭಾಷೆಯಲ್ಲಿನ–ಲಿಂಗವಚನ ವ್ಯವಸ್ಥೆಯನ್ನು ವಿಮರ್ಶಿಸಿ.

ಅಥವಾ

ಭಾಷಾ ಕುಟುಂಬ ಎಂದರೇನು? ಕನ್ನಡ ಯಾವ ಭಾಷಾ ಕುಟುಂಬಕ್ಕೆ ಸೇರಿದೆ ? ಕಾರಣಗಳನ್ನಿತ್ತು ವಿವರಿಸಿ.

2. ತತ್ಸಮ–ತದ್ಭವಗಳೆಂದರೇನು ? ಉದಾಹರಣೆಗಳೊಂದಿಗೆ ಸ್ಪಷ್ಟಪಡಿಸಿ.

1985 1. ಭಾಷೆಯ ಬೆಳವಣಿಗೆಗೆ ಪ್ರಮುಖ ಕಾರಣಗಳಾವುವು ? ಚರ್ಚಿಸಿ.

ಅಥವಾ

ಕನ್ನಡ ಭಾಷೆಯ ಬೆಳವಣಿಗೆಯನ್ನು ನಿರೂಪಿಸಿ.

2. ಕನ್ನಡದಲ್ಲಿ ಕಾರಕ, ವಿಭಕ್ತಿ ಮತ್ತು ಪ್ರತ್ಯಯಗಳನ್ನು ಕುರಿತು ವಿವರ ನೀಡಿ.

## Class II

1977 1. ಕನ್ನಡ ಭಾಷೆಯ ಅವಸ್ಥಾಂತರಗಳು ಯಾವುವು ? ನಿದರ್ಶನ ಪೂರ್ವಕವಾಗಿ ವಿವರಿಸಿ.

2. ಟಿಪ್ಪಣಿ : ನಡುಗನ್ನಡ

1978 ಕಾವ್ಯ ಭಾಷೆಯ ಸ್ವರೂಪವನ್ನು ಕುರಿತು ಹಿಂದಿನ ಹಾಗೂ ಇಂದಿನ ಕವಿಗಳ ಧೋರಣೆಯನ್ನು ಕಾಲ್ಪನಿಕವಾಗಿ ಸಮೀಕ್ಷಿಸಿರಿ.

2. ಟಿಪ್ಪಣಿ : ಪಂಚದ್ರಾವಿಡಗಳು.

1980 1. ಪ್ರಮುಖವಾದ ದ್ರಾವಿಡ ಭಾಷೆಗಳಾವುವು ? ಕನ್ನಡ ಆ ಭಾಷಾ ವರ್ಗಕ್ಕೆ ಸೇರಿದುದೆಂದು ಹೇಗೆ ಹೇಳುತ್ತೀರಿ ?

1981 1. ಕನ್ನಡವನ್ನು ಮುಖ್ಯವಾಗಿಟ್ಟುಕೊಂಡು ದ್ರಾವಿಡ ಭಾಷೆಗಳ ಸ್ವರೂಪವನ್ನು ಸಂಗ್ರಹವಾಗಿ ಪರಿಚಯ ಮಾಡಿಕೊಡಿ.

1982 1. ಕನ್ನಡ ಭಾಷೆಯ ಬೇರೆ ಬೇರೆ ಅವಸ್ಥೆಗಳನ್ನು ಗುರುತಿಸಿ ಅವುಗಳ ಸ್ವರೂಪವನ್ನು ಸಂಗ್ರಹವಾಗಿ ತಿಳಿಯಪಡಿಸಿರಿ.

1983 1. ಕನ್ನಡವು ಪ್ರಪಂಚದ ಯಾವ ಭಾಷಾ ವರ್ಗಕ್ಕೆ ಸೇರಿದೆ ? ಆ ವರ್ಗದ ಬೇರೆ ಭಾಷೆಗಳ ನೆರವಿನಿಂದ ಸ್ಪಷ್ಟಪಡಿಸಿ.

1984 1. ಕನ್ನಡವನ್ನು ಮುಖ್ಯವಾಗಿ ಗಮನಿಸಿ, ದ್ರಾವಿಡ ಭಾಷೆಗಳ ಪರಿಚಯ ಮಾಡಿಕೊಡಿರಿ.

1985 1. ಕನ್ನಡ ಭಾಷೆಯ ಅವಸ್ಥಾಂತರಗಳನ್ನು ಗುರುತಿಸಿ, ಅವುಗಳ ಬಗ್ಗೆ ವಿದ್ವಾಂಸರು ನಡೆಸಿದ ಚರ್ಚೆಯನ್ನು ನಿರೂಪಿಸಿರಿ.

## ಸಾ ಶಿ ಮ ಸಾ ಹಿ ತ್ಯ ಸಂ ಪ ದ

| | | | |
|---|---|---|---|
| 1. | ಶಿವತಾಂಡವ | ಕವನ ಸಂಕಲನ | 1951 |
| 2. | ಮರೀಬೇಡಿ | ಪ್ರಹಸನ | 1961 |
| 3. | ಕೆಂಗನಕಲ್ಲು | ಕವನ ಸಂಕಲನ<br>(ರಾಜ್ಯ ಸರ್ಕಾರದ ಪ್ರಶಸ್ತಿಪಡೆದ ಕೃತಿ) | 1962 |
| 4. | ವಿಭೂತಿ ಪುರುಷರು | ಜೀವನ ಚಿತ್ರಣ | 1963 |
| 5. | ಸೀತಾವನವಾಸ ಸಂಗ್ರಹ | ಕಾವ್ಯ (ಸಂ.) | 1963 |
| 6. | ಕೆಳದಿ ರಾಜಾಭ್ಯುದಯಂ | ಅಪೂರ್ಣ ಕಾವ್ಯ (ಸಂ.) | 1964 |
| 7. | ಭಾರತ ರತ್ನ | ಜೀವನ ಚಿತ್ರಣ | 1995 |
| 8. | ಪುರುಷರ ಸಿಂಹ | ಐತಿಹಾಸಿಕ ಕಾದಂಬರಿ | 1966 |
| 9. | ಹೇಮಕೂಟ | ,, | 1966 |
| 10. | ವಿಜಯವಾತಾಪಿ | ರಂಗನಾಟಕ | 1966 |
| 11. | ಶ್ರೀ ಮರುಳಸಿದ್ಧೇಶ್ವರ ಮಹಾಪುರಾಣಂ | ಕಾವ್ಯ (ಸಂ.) | 1967 |
| 12. | ಕನ್ನಡವ ಮೂವರು ಕಟ್ಟಾಳುಗಳು | ಬೇರೆಯವರೊಡನೆ | 1968 |
| 13. | ಅಗ್ರತಾಂಬೂಲ | ಕವನ ಸಂಕಲನ (ಸಂ.) | 1969 |
| 14. | ಶ್ರೀ ಚನ್ನಬಸವ ಶಿವಯೋಗಿಗಳ ಚರಿತ್ರೆ | ಸಂಪಾದಿತ | 1971 |
| 15. | ಹರಿಹರನ ಹತ್ತು ರಗಳೆಗಳು | ಕಾವ್ಯ (ಸಂ.) | 1972 |
| 16. | ವಿಪರ್ಯಾಸ | ಕವನ ಸಂಕಲನ | 1972 |
| 17. | ಘೋಷವತಿ | ಕವನ ಸಂಕಲನ | 1972 |
| 18. | ಭಾಸನ ಮಕ್ಕಳು | ವಿಮರ್ಶೆ<br>(ದೇವರಾಜ ಬಹದ್ದೂರ್ ಪ್ರಶಸ್ತಿಪಡೆದ ಕೃತಿ) | 1972 |
| 19. | ಸ್ವಪ್ನವಾಸವ ದತ್ತ (ನಾಟಕ) | (ಭಾಷಾಂತರ) | 1979 |
| 20. | ನೆಲದ ಸೊಗಡು | ಸಣ್ಣ ಕತೆಗಳ ಸಂಕಲನ | 1976 |
| 21. | ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ | ಪಿಹೆಚ್.ಡಿ. ಮಹಾ ಪ್ರಬಂಧ | 1979 |
| 22. | ಎರಡು ನಾಟಕಗಳು | ನಾಟಕ | 1979 |
| 23. | ಶಿವಮೂರ್ತಿಶಾಸ್ತ್ರೀ | ವ್ಯಕ್ತಿಚಿತ್ರ | 1979 |
| 24. | ಭಾರತೀಯ ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡಿಗರು | ಜ್ಞಾನಪೀಠ ಪ್ರಶಸ್ತಿ ಕುರಿತ ಸಮಗ್ರ ಪರಿಚಯಾತ್ಮಕ ಹಾಗೂ ವಿಮರ್ಶಾತ್ಮಕ ಕೃತಿ | 1980 |
| 25. | ವಚನ ವೈಭವ | ಸಂಶೋಧನ ಕೃತಿ | 1981 |
| 26. | ಕಾವ್ಯಾನಂದ | ಡಾ|| ಸಿದ್ದಯ್ಯ ಪುರಾಣಿಕರ ಸಂಭಾವನಾ ಗ್ರಂಥ (ಸಂ.) | 1982 |
| 27. | ಜಾನಪದ ಕತೆಗಳು | ಜಾನಪದ | 1983 |
| 28. | ರೇಣುಕ ಪರಂಜ್ಯೋತಿ | ನೃತ್ಯರೂಪಕ | 1984 |
| 29. | ಬೃಂದಾವನಲೀಲೆ | ಕವನ ಸಂಕಲನ | 1984 |

| | | |
|---|---|---|
| 30. ರಾಸಲೀಲೆ | ಕವನ ಸಂಕಲನ | 198 |
| 31. ರೂಪಸಿ | ಕವನ ಸಂಕಲನ | 198 |
| 32. ಸಾಮರಸ್ಯದ ಶಿಲ್ಪಿ | ಆಧ್ಯಾತ್ಮಿಕ ಕಾದಂಬರಿ | 198 |
| 33. ಚೈತ್ರ-ಜ್ಯೋತಿ | ಕವನ ಸಂಕಲನ | 198 |
| 34. ನನ್ನ ಕವನಗಳು | ಕವನ ಸಂಕಲನ | 198 |
| 35. ಬಾರೋ ಮೈಲಾರಕೆ | ಕವನ ಸಂಕಲನ | 198 |
| 36. ವೀರಶೈವ ವಿಚಾರ ಸಂಕಿರಣ | ತತ್ವ ದರ್ಶನ | 198 |
| 37. ಸಾಶಿಮು ಆಯ್ದ ಕತೆಗಳು | ಕವನ ಸಂಕಲನ | 198 |
| 38. ಮಲ್ಲಿಗೆಗೊಂದು ಒಳ್ಳೆ ಮಾತು | ಸಾಂಸ್ಕೃತಿಕ ಪ್ರಬಂಧಗಳು | 198 |
| 39. ಮಹಾಪ್ರಸಾದಿ | ಆಧ್ಯಾತ್ಮಿಕ ಕಾದಂಬರಿ | 198 |
| 40. ಸಾಹಿತ್ಯೋಪಾಸಕ | ಸಂಸ್ಮರಣ ಸಂಚಿಕೆ | 198 |
| 41. ಶೂನ್ಯ ಸಂಪಾದನೆಗೊಂದು ಮುನ್ನುಡಿ | ವಿಮರ್ಶೆ | 198 |
| 42. ಶೂನ್ಯ ಸಂಪಾದನೆ: ಒಂದು ಅಧ್ಯಯನ | ತತ್ವ ದರ್ಶನ (ಸಂ) | 198 |
| 43. ಹೂವ ತಂದವರು | ವ್ಯಕ್ತಿಚಿತ್ರ | 197 |
| 44. ಗದ್ಯ ಕುಸುಮಾಂಜಲಿ | ಗದ್ಯ ಸಾಹಿತ್ಯ/ಇತರರೊಡನೆ | 198 |
| 45. ಬನವಾಸಿ ದರ್ಶನ | ಕ್ಷೇತ್ರದರ್ಶನ (ಸಂ) | 197 |
| 46. ಅಮೃತೋತ್ಸವ | ಗದ್ಯ (ಸಂ) | 19 |
| 47. ರಜತ ಕರಂಡ | ಸಂಭಾವನಾ ಗ್ರಂಥ (ಸಂ) | 19 |
| 48. ಶ್ರೀ ತೋಂಟದಾರ್ಯ ವಚನ ವ್ಯಾಖ್ಯೆ | ವ್ಯಾಖ್ಯಾನ | 19 |
| 49. ಶ್ರೀ ಸಿದ್ಧಲಿಂಗೇಶ್ವರ ಶತಕ | ಕಾವ್ಯ (ಸಂ) | 19 |
| 50. ಅರುವಿನಾಗರದಲ್ಲಿ | ಕಾವ್ಯ (ಸಂ) | 19 |
| 51. ಕನ್ನಡ ಸಂಪುಟ ೧ | ಸಂಪಾದಿತ (ಇತರರೊಡನೆ) | 19 |
| 52. ನೂತನ ಚೇತನ | ಸಂಪಾದಿತ (ಇತರರೊಡನೆ) | 19 |
| 53. ತೋಂಟದಾರ್ಯ ರಗಳೆ | ಸಂಪಾದಿತ (ಇತರರೊಡನ) | 19 |
| 54. ಮರುಳಸಿದ್ಧ | ಸಂಸ್ಮರಣ ಸಂಚಿಕೆ (ಸಂ) | 19 |
| 55. ಅಭಿವ್ಯಕ್ತಿ | ವಿಮರ್ಶಾತ್ಮಕ ಲೇಖನಗಳು | 19 |
| 56. ಅವಸ್ಥಾ | ಸಾಹಿತ್ಯಿಕ ಪ್ರಬಂಧಗಳು | 19 |
| 57. ಆತ್ಮೀಯ | ವ್ಯಕ್ತಿ ಚಿತ್ರಗಳು | 19 |
| 58. ಗಿಲ್ಲಮಿಶ್ | ಸಂಶೋಧನ ಲೇಖನಗಳು | 19 |
| 59. ಮಾಸ್ತಿಯವರ ಕಾವ್ಯ ೧ | ವಿಮರ್ಶೆ | 19 |
| 60. ದೇವುಡು | ವ್ಯಕ್ತಿಚಿತ್ರ | 19 |
| 61. ಸುರಭಿ | ಕ್ಯಾಸೆಟ್ ಹಾಡುಗಳು | 19 |

# ರಾಗಿಣಿ ಪುಸ್ತಕಗಳು

| | | | |
|---|---|---|---|
| 1. ಶ್ರೀ ರೇಣುಕ ಪರಂಜ್ಯೋತಿ | ನೃತ್ಯರೂಪಕ | 1989 | ಡಾ॥ ಸಾ. ಶಿ. ಮರುಳಯ್ಯ |
| 2. ಪುಟಾಣಿ ಪುರಾಣ ಕತೆಗಳು | ಸಣ್ಣ ಕತೆಗಳು | 1987 | ಶ್ರೀಮತಿ ಜಯಾರಾಜಶೇಖರ್ |
| 3. ಸಿಂಫನಿ | ಕವನಸಂಕಲನ | 1987 | ಡಾ॥ ಶ್ರೀನಿವಾಸ ಕುಲಕರ್ಣಿ |
| 4. ಎಳ್ಳು-ಬೆಲ್ಲ | ಕವನಸಂಕಲನ | 1988 | (ಸಂ) ಜೈಕುಮಾರ್ |
| 5. ಸ್ಮರಣೀಯರು | ಕವನಸಂಕಲನ | 1988 | ಶ್ರೀಮತಿ ಬಿ.ಎಸ್. ಚಂದ್ರಕಲಾ |
| 6. ಅರುವಿನಾಗರದಲ್ಲಿ | ಕಾವ್ಯ | 1990 | (ಸಂ) ಡಾ॥ ಸಾ. ಶಿ. ಮರುಳಯ್ಯ |
| 7. ಶ್ರೀ ತೋಂಟದಾರ್ಯನ ವಚನ ವ್ಯಾಖ್ಯೆ | ವ್ಯಾಖ್ಯಾನ | 1990 | —,,— |
| ವಿವಾದರೊಂದಾಗು | ಕವನಸಂಕಲನ | 1990 | ಧರ್ಮದಾಸ್ ಬಾರ್ಕಿ |
| ಕಾವಳದ ಕವನಗಳು | ಕವನಸಂಕಲನ | 1990 | ಧರ್ಮದಾಸ್ ಬಾರ್ಕಿ |
| ಶ್ರೀ ಸಿದ್ಧಲಿಂಗೇಶ್ವರ ಶತಕಂ | ಕಾವ್ಯ | 1991 | (ಸಂ) ಡಾ॥ ಸಾ. ಶಿ. ಮರುಳಯ್ಯ<br>ಶ್ರೀಮತಿ ನಾಗರತ್ನ ಶಾಂತಮಲ್ಲಪ್ಪ |
| ಸಂವಾದ ಬೋಧೆ | ಕವನಸಂಕಲನ | 1991 | ನಾ. ಗೋಪಜ್ಜಿ |
| ತೋಂಟದಾರ್ಯ ರಗಳೆ | ಕಾವ್ಯ | 1991 | (ಸಂ) ಡಾ॥ ಸಾ. ಶಿ. ಮರುಳಯ್ಯ<br>ಶ್ರೀಮತಿ ನಾಗರತ್ನ ಶಾಂತಮಲ್ಲಪ್ಪ |
| ಬಾಲರ ಸೊಂಪು | ಕವನಸಂಕಲನ | 1983 | ಶ್ರೀಮತಿ ಬಿ.ಎಸ್. ಚಂದ್ರಕಲಾ |
| ಆತ್ಮೀಯ | ಕವಿ-ಕಾವ್ಯ ಪರಿಚಯ | 1991 | ಡಾ॥ ಸಾ. ಶಿ. ಮರುಳಯ್ಯ |
| ಅವಸ್ಥಾ | ಪ್ರಾಯೋಗಿಕ ವಿಮರ್ಶೆ | 1991 | —,,— |
| ಮನಿಷಾ | ಸಂಶೋಧನಾತ್ಮಕ ಪ್ರಬಂಧಗಳು | 1991 | —,,— |
| ಸುರಭಿ | ಕವನಸಂಕಲನ | 1992 | ಡಾ॥ ಸಾ. ಶಿ. ಮರುಳಯ್ಯ |
| ದೂಷಿತರು | ಕಥಾಸಂಕಲನ | 1992 | ಶ್ರೀಮತಿ ರೂಪಾ ಕುಲಕರ್ಣಿ |
| ಬೃಂದಾವನಲೀಲೆ | ಕವನಸಂಕಲನ | 1992 | ಡಾ॥ ಸಾ. ಶಿ. ಮರುಳಯ್ಯ |

ಭಾಷೆ ಎನ್ನುವುದು ಮೂಲತಃ ಒಂದು ಶಬ್ದವ್ಯಾಪಾರ. ಶಾಬ್ದಿಕ ಪ್ರವೃತ್ತಿ ಎಲ್ಲ ಪ್ರಾಣಿಗಳಲ್ಲಿಯೂ ಇದೆ. ನೋವು ನಲಿವುಗಳಿಗೆ, ಹಸಿವು ಕಸುವುಗಳಿಗೆ ಅವು ಪ್ರತಿಕ್ರಿಯಿಸುತ್ತವೆ; ತಕ್ಕಂತೆ ಉದ್ಗರಿಸುತ್ತವೆ. ಆ ಬಗೆಯ ಶಬ್ದಾಭಿವ್ಯಕ್ತಿಯ ಸಂಕೇತವೆ ಭಾಷೆ. ಭಾಷೆ ಎನ್ನುವುದು ಆತ್ಮವಿರುವ ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿ, ಎನ್ನುತ್ತಾನೆ ಈಸ್ಲರ್. ಅಂತೆಯೇ ಭಾಷೆ ಎನ್ನುವುದು ಸಮರ್ಥ ಸಂವಹನ ಸಾಧನ (Media for Communication) ಅಮೂರ್ತ ಭಾವನೆಗಳಿಗೆ ಕೊಟ್ಟ ಮಾತಿನ ರೂಪ. ನಿತ್ಯವ್ಯವಹರಣೆಯ ಶ್ರೇಷ್ಠ ಮಾಧ್ಯಮ. ಅದು ಧ್ವನ್ಯಂಗಳ ನೆರವಿನಿಂದ ಪ್ರಕಟವಾಗುವ ಧ್ವನಿಸಂಕೇತಗಳ ಸಮುದಾಯ. ಬಾಯಿಂದ ಬರುವ ಶಬ್ದ ಸ್ವರೂಪವನ್ನು ಧ್ವನಿಮಾ (Phoneme) ಎನ್ನುತ್ತಾರೆ. ಅಂತಹ ಧ್ವನಿಮಾಗಳ ಒಟ್ಟಂದವೇ ಭಾಷೆ. ಆದ್ದರಿಂದ ಭಾಷೆ ಎನ್ನುವುದು ಬರಿಯ ಶಬ್ದ ವ್ಯಾಪಾರವಲ್ಲ, ಸುವ್ಯವಸ್ಥಿತ ಶಬ್ದವ್ಯಾಪಾರ. ಒಬ್ಬ ವಕ್ತೃವಿನ ಭಾವಗಳು ಬೇರೊಬ್ಬ ಶ್ರೋತೃವಿನ ಭಾವಕಲ್ಪವನ್ನು ತಲುಪಿ, ಗ್ರಹಣದ ಮೂಲಕ ಅಲ್ಲಿ ಆಲೋಚನೆಯ ಅಲೆಗಳನ್ನೆಬ್ಬಿಸುವ ಸಾಧನೆ.